## "ಸಿದ್ಧಗಂಗಾ" ಚಿರಾಯುವಾಗಲೆಂದು

ಹರಸಿ ಹಾರೈಸಿರುವ ಆಜೀವ ಸದಸ್ಯರ ಬಳಗ

349. ಶ್ರೀ ಕೆ. ಎಂ. ಜಲೀಲ್ & ಬ್ರದರ್
ಕೆ. ಆರ್. ನಗರ ಮೈಸೂರು ಜಿಲ್ಲೆ.

350. ಶ್ರೀ ಪಿ. ಶಿವಶಂಕರ್
ಶಿವಕೃಪ, ಮೈಸೂರು-4

351. ಶ್ರೀಮತಿ ಎಂ. ಪುಟ್ಟಮ್ಮ
ತ್ಯಾಗರಾಜರೋಡ್, ಮೈಸೂರು-4

352. ಶ್ರೀ ಜಿ. ಎಸ್. ಎಡೂರಪ್ಪ
ಹೋಟೆಲ್ ಮಾಲೀಕರು,
ನಂಜನಗೂಡು ಟೋಲ್‌ಗೇಟ್, ಮೈಸೂರು.

353 ಶ್ರೀ ಎಲ್. ಮುದ್ದಪ್ಪ. ಮರ್ಚೆಂಟ್ಸ್
S/o ಲಿಂಗಪ್ಪ
ದೇವನಾಪ್ರುರ ಮೈಸೂರು ತಾ

354. ಶ್ರೀ ಕೆ. ಎಂ. ತಮ್ಮಯ್ಯ
ವಾಣಿವಿಲಾಸಪುರಂ, ಮೈಸೂರು-2

355. ಶ್ರೀ ಎಂ. ಎಸ್. ಸಿದ್ಧವೀರಶೆಟ್ಟಿ
ಸಿದ್ಧಲಿಂಗ ಕೃಪ
ಕೆ. ಎಲ್. ಪುರಂ, ಮೈಸೂರು-12

356. ಶ್ರೀ ಜೆ. ಎಸ್. ಸುರಳಿಕೇರಿಮಠ್ &
ಬ್ರದರ್ಸ್ ಪ್ರೊ॥ ಜಯದೇವ ಸ್ಟೋರ್ಸ್,
ರಾಣಿಬೆನ್ನೂರು, ಧಾರಾವಾಡ ಜಿಲ್ಲೆ.

357. ಶ್ರೀ ಜಿ. ಸಿ ಬಸವರಾಜು
ಕೊರಟಗೆರೆ ತಾ॥ ತುಮಕೂರು ಜಿಲ್ಲೆ.

358. ಶ್ರೀ ಎಸ್. ಆರ್. ಸದಾಶಿವ
S/o ಜಿ. ಪಿ. ರುದ್ರಪ್ಪ ಮರ್ಚೆಂಟ್.
ನೆಲಮಂಗಲ, ತುಮಕೂರು ಜಿಲ್ಲೆ.

359. ಶ್ರೀ ವೀರಭದ್ರಸ್ವಾಮಿ
ಅಸಿಸ್ಟೆಂಟ್ ಕಮರ್ಷಿಯಲ್ ಟ್ಯಾಕ್ಸ್
ಆಫೀಸರ್. ರಾಣಿಬೆನ್ನೂರು,
ಧಾರವಾಡ ಜಿಲ್ಲೆ.

360. ಶ್ರೀ ಎಸ್. ಎಲ್. ಜಂಬಿಗೆ ಶಿವಣ್ಣ &
ಬ್ರದರ್ಸ್
ರಾಣಿಬೆನ್ನೂರು. ಧಾರವಾಡ ಜಿಲ್ಲೆ

(ಮುಂದುವರಿಯುತ್ತದೆ)



# ಶ್ರೀವಾಣಿ

ಸ್ವಾತಂತ್ರ್ಯವೆಂದರೆ ಸ್ವೇಚ್ಛಾಚಾರವಲ್ಲ. ಅದು ಆತ್ಮ ವಿಕಾಸಕ್ಕೆ ರಕ್ಷೆ. ಇದಕ್ಕೆ ಒಂದು ಕತೆ ನೆನಪಿಗೆ ಬರುತ್ತಿದೆ –"ಒಂದು ಊರಿನಲ್ಲಿ ಒಬ್ಬ ಕುರುಬನ ಹತ್ತಿರ ಒಂದು ಕುರಿಮಂದೆ ಇದ್ದಿತು. ಹಗಲೆಲ್ಲಾ ಕುರಿಗಳು ಒಡೆಯನ ರಕ್ಷಣೆಯಲ್ಲಿರುತ್ತಿದ್ದವು; ರಾತ್ರಿಯ ವೇಳೆ ರೊಪ್ಪದಲ್ಲಿ ಬೆಚ್ಚಗೆ ಮಲಗಿ ನಾಯಿಯ ರಕ್ಷಣೆಯಲ್ಲಿರುತ್ತಿದ್ದವು. ಒಂದು ದಿನ ರಾತ್ರಿ ಬೆಳದಿಂಗಳಲ್ಲಿ ಒಂದು ಕುಂಮರಿಗೆ ಬಂಧನದ ಜೀವನ ಬೇಸರವೆನಿಸಿ, ಸ್ವತಂತ್ರ ಜೀವನದ ಆಸೆಯಾಗಿ, ತನ್ನ ಒಡನಾಡಿಗಳನ್ನೆಲ್ಲಾ ರೊಪ್ಪದಿಂದ ಹೊರಗೆ ಹೋಗಿ ಸ್ವಚ್ಛಂದವಾಗಿರೋಣವೆಂದು ಪ್ರಚೋದಿಸಿತು. ಯಾವ ಕುರಿಯೂ ಇದರ ಅಭಿಪ್ರಾಯವನ್ನು ಅನುಮೋದಿಸಲಿಲ್ಲ. ಕ್ರಾಂತಿಕಾರಿ ಮನೋಭಾವದ ಈ ಮರಿ ಎಲ್ಲ ಕುರಿಗಳನ್ನೂ ಹೀಯಾಳಿಸಿ ತಾನೊಬ್ಬನೇ ಸ್ವತಂತ್ರವಾಗಿ ಬೆಳದಿಂಗಳ ರಾತ್ರಿಯಲ್ಲಿ ಕುಣಿದು ಕುಪ್ಪಳಿಸಿ ಸ್ವಚ್ಛಂದ ಜೀವನದ ಸುಖವನ್ನು ಅನುಭವಿಸುವೆನೆಂದು ಜಂಭದಿಂದ ಹೊರಗೆ ಹಾರಿ ಓಡಿತು. ಅದು ಹಾಡುತ್ತಾ, ಕುಣಿಯುತ್ತಾ ಊರಮುಂದಿನ ಕಾಡನ್ನು ಸೇರಿತು ಸ್ವಾತಂತ್ರ್ಯ ಜೀವನದ ಕನಸು ಕಾಣುತ್ತಿದ್ದ ಅದರ ಅರಿವಿಗೆ ತಾನು ಮನೆ ಬಿಟ್ಟು ಬಹುದೂರ ಬಂದುದು ಅರಿವೇ ಇಲ್ಲ. ಮೈಮರೆತು ಕುಣಿದು ಸಂತೋಷವನ್ನಾಚರಿಸುತ್ತಿದ್ದ ಅದಕ್ಕೆ ಕಾಡಿನಲ್ಲೇ ವಾಸವಾಗಿದ್ದ ಹುಲಿರಾಯ ಬಂದುದು ಕಾಣಲೇ ಇಲ್ಲ. ಒಮ್ಮೆಲೇ ತನ್ನ ಮೇಲೆ ಎರಗಿ ತನ್ನ ಸ್ವಾತಂತ್ರ್ಯ ಜೀವನಕ್ಕೆ ತೆರೆಯೆಳೆವ ಹುಲಿರಾಯನನ್ನು ಅದು ನೋಡುವ ಮುನ್ನವೇ ಅದು ಇಹಲೋಕದ ವ್ಯಾಪಾರವನ್ನು ಮುಗಿಸಿಯಾಗಿತ್ತು. ಪಾಪ" ಈ ಕಥೆಯಿಂದ ತಿಳಿದು ಬರುವುದಾದರೂ ಏನು? ಸ್ವಾತಂತ್ರ್ಯ ಜೀವನಕ್ಕೆ ನಿಜವಾದ ಅರ್ಥ ಸ್ವಚ್ಛಂದ ಜೀವನವಲ್ಲ. ನಮ್ಮ ಹಿತರಕ್ಷಕರ ಅಂಕೆಯಲ್ಲಿರುವುದು ಪರತಂತ್ರ ಜೀವನವಲ್ಲ. ರಕ್ಷಕರ ಅಂಕೆಯಲ್ಲಿದ್ದರೂ ಆತ್ಮ ರಕ್ಷಣೆಗೆ, ಅದರ ವಿಕಾಸಕ್ಕೆ ಎಡೆಯಿದ್ದರೆ ಅದು ಸ್ವತಂತ್ರಜೀವನವೇ ಆಗುತ್ತದೆ.

# ‘ಸಿದ್ಧಗಂಗಾ’

ಆಗಸ್ಟ್, ೧೯೭೭

ಸಂಪುಟ–೧೪ ಸಂಚಿಕೆ–೮

ಪ್ರಕಾಶಕರು
ಹೆಚ್. ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

ಸಂಪಾದಕರು
ಪಂ॥ ಚನ್ನಪ್ಪ ಎರೇಸೀಮೆ
ಕೆ. ಜಿ. ರಂಗಯ್ಯ

ಜಾಹೀರಾತು ವ್ಯವಸ್ಥಾಪಕರು
ಎಂ. ರೇಣುಕಾರಾಧ್ಯ

ಮುದ್ರಕರು
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ

ಪ್ರಕಟನೆಯ ಸ್ಥಳ
ಶ್ರೀ ಸಿದ್ಧಗಂಗಾ ಕ್ಷೇತ್ರ

ಚಂದಾ ವಿವರ
ವಾರ್ಷಿಕ ಚಂದಾ: 10 ರೂ
ಆಜೀವ ಸದಸ್ಯತ್ವ: 101 ರೂ

## ಈ ಸಂಚಿಕೆಯಲ್ಲಿ



### ಮುಖಪುಟ

ರಾಷ್ಟ್ರೀಯ ಸಮನ್ವಯದ ಹೊಸ ಮನೋಭಾವ ರೂಪಿಸಿಕೊಳ್ಳಲು ಕರೆ ನೀಡಿರುವ ನೂತನ ರಾಷ್ಟ್ರಪತಿ ನೀಲಂ ಸಂಜೀವರೆಡ್ಡಿ.

### ಲೇಖಕರಲ್ಲಿ ಮನವಿ

‘ಸಿದ್ಧಗಂಗಾ’ ಲೇಖಕರಿಂದ ಧಾರ್ಮಿಕ, ಸಾಂಸ್ಕೃತಿಕ ಐತಿಹಾಸಿಕ ಹಾಗೂ ವೈಚಾರಿಕ ಲೇಖನಗಳು, ಸಣ್ಣಕಥೆ, ಕವನ, ಪ್ರಬಂಧ ಇವುಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಫುಲ್‌ಸ್ಕೇಪ್ ಸೈಜಿನ 3 ಪುಟಗಳಿಗೆ ಮೀರದಂತಿದ್ದು ಕಾಗದದ ಒಂದೇ ಮಗ್ಗುಲಲ್ಲಿ ಬರೆಯಲ್ಪಟ್ಟಿರಬೇಕು. ಅಸ್ವೀಕೃತ ಲೇಖನಗಳನ್ನು ಹಿಂದಿರುಗಿಸಲಾಗುವುದಿಲ್ಲ. ಸ್ವೀಕೃತ ಲೇಖನಗಳಿಗೆ ‘ಸಿದ್ಧಗಂಗಾ’ ಅಗ್ಗಿಂದಾಗ್ಗೆ ನಿಗದಿಪಡಿಸಿಕೊಳ್ಳುವ ಸಂಭಾವನೆಯನ್ನು ನೀಡಲಾಗುವುದು. ಲೇಖನಗಳನ್ನು

“ಸಂಪಾದಕರು”
‘ಸಿದ್ಧಗಂಗಾ’ [ಕನ್ನಡ ಮಾಸ ಪತ್ರಿಕೆ]
ಶ್ರೀ ಸಿದ್ಧಗಂಗಾ ಕ್ಷೇತ್ರ –572131 ತುಮಕೂರು ಜಿಲ್ಲೆ
ಇವರಿಗೆ ಕಳಿಸಿ ಕೊಡಬೇಕಾಗಿ ಪ್ರಾರ್ಥನೆ.

### ಚಂದಾದಾರರಲ್ಲಿ ಮನವಿ

ನಿಮ್ಮ ಚಂದಾ ಅವಧಿ ಮುಗಿಯುವವರೆಗೆ ವಿಳಾಸ ಬದಲಾವಣೆ ಮತ್ತು ಇತರೆ ಬಗ್ಗೆ ವ್ಯವಹರಿಸುವಾಗ ವಿಳಾಸದ ಹಿಂಬದಿ ಇರುವ ಕ್ರಮಾಂಕ ಅಥವಾ ಯಾರ ಮೂಲಕ ಸದಸ್ಯತ್ವ ಪಡೆದಿರುವಿರೋ ಆ ನಮ್ಮ ಪ್ರತಿನಿಧಿಗಳ ಹೆಸರನ್ನು ಸೂಚಿಸಿ ಪತ್ರ ಬರೆಯಿರಿ.

ಚಂದಾ ಅವಧಿ ಮುಗಿದಿರುವ ಮಾನ್ಯ ಓದುಗರು ನೂತನ ಸಾಲಿಗೆ ಮುಂದುವರಿಸಿಕೊಳ್ಳಬೇಕಾಗಿ ವಿನಂತಿ.

ಚಂದಾ ಬಾಕಿ ಇರುವವರು ಸಂದಾಯ ಮಾಡಿ ‘ಸಿದ್ಧಗಂಗಾ’ ಮುನ್ನಡೆಗೆ ಸಹಕರಿಸಿ.

ಪ್ರಕಾಶಕರು
‘ಸಿದ್ಧಗಂಗಾ’ ಮಾಸ ಪತ್ರಿಕೆ, ಸಿದ್ಧಗಂಗಾಮಠ–572131, ತುಮಕೂರು ಜಿಲ್ಲೆ

# ನವನೀತ

(ಸಂಸ್ಕೃತ ಶ್ಲೋಕಗಳ ಭಾವಾನುವಾದ)

**ಯದಶಕ್ಯಂ ನ ತಚ್ಛಕ್ಯಂ ಯಚ್ಛಕ್ಯಂ ಶಕ್ಯಮೇವ ತತ್ ।**
**ನೋದಕೇ ಶಕಟಂ ಯಾತಿ ನ ಚ ನೌರ್ಗಚ್ಛತಿ ಸ್ಥಲೇ ॥**

ಯಾವುದಾಗದೊ ಜಗದೊಳಾಗದದೂ ಎಂದೆಂದು
ಆಗಿಯೇ ತೀರುವುದು ಆಗಬಹುದಾದ್ದು
ಬಂಡಿ ಸಾಗದು ನೀರ ಗುಂಡಿಯಲಿ ತಾ ತೇಲೆ
ಹಡಗು ತೇಲದು ನದಿಯ ದಡದ ಮೇಲೆ.



**ಔದಂಬರಾಣಿ ಪುಷ್ಪಾಣಿ ಶ್ವೇತವರ್ಣಂ ಚ ವಾಯಸಃ ।**
**ಮತ್ಸ್ಯಪಾಂತಾಜಲೀ ಬದ್ಧಾನ್ ನ ನಾರೀ ಹೃದಯಂಗಮಾ ॥**

ಕಾಣುವುದು ಬಲು ಸುಲಭ ಅತ್ತಿಹೂವನ್ನು,
ನೀರಿನಲಿ ಮೀನುಗಳ ಹೆಜ್ಜೆ ಗುರುತನ್ನು ;
ಬಿಳಿಕಾಗೆಯನು ಕೂಡ ಕಾಣಬಹುದೆನ್ನು
ಅದರಾಗದು ಸ್ತ್ರೀಯ ಒಳಮರ್ಮವನ್ನು.



**ಕವಿತಾ ವನಿತಾ ಚೈವ ಸ್ವಯಮೇವಾಗತಾ ವರಾ ।**
**ಬಲಾದಾಕೃಷ್ಯಮಾಣಾತ್ತು ಸರಸಾ ವಿರಸಾಯತೇ ॥**

ಕವಿತೆ, ವನಿತೆಯರನ್ನು ಬಯಸಿ ಮನಸೋತು
ಕರೆಯದಿರು ; ಒಲಿದವರೆ ಬರುವುದೊಳಿತು
ಬಲವಂತದಿಂದವರನೆಳೆದು ನೀ ತರಲು
ಸರಸ ತಾನಾಗುವುದು ವಿರಸವಿದ ಕೇಳು.

—'ಕಾವ್ಯಸುಧಾಪ್ರಿಯ'

## ಅಮೃತ ಬಿಂದು

ಆಗಷ್ಟು 15 ರ ದಿನಾಂಕದಂದು ನಮಗೆ ಅತ್ಯಂತ ಸಂತೋಷದ ಸಂಭ್ರಮ.ದ ನಾಡಹಬ್ಬ. ಕಾರಣ ಅಂದು ಮಾನವ ಮಾನವನಾಗಿ ಸ್ವತಂತ್ರ ಬಾಳನ್ನು ಕಂಡ ದಿನ. ಈ ಸ್ವಾತಂತ್ರವೆನ್ನುವ ಪದ ಎಷ್ಟು ಪವಿತ್ರವೋ ಅಷ್ಟೇ ಅರ್ಥ ವೈಶಾಲ್ಯದಿಂದ ಕೂಡಿದೆ. ಇದು ಪ್ರಕೃತಿದತ್ತವಾದ ಗಾಳಿ, ನೀರು, ಬೆಳಕಿನಂತೆ, ಪ್ರತಿಯೊಬ್ಬ ವ್ಯಕ್ತಿಗೂ ಹುಟ್ಟನೊಡನೆ ಬಂದ ಜನ್ಮಸಿದ್ಧ ಹಕ್ಕು. "ಸರ್ವರಿಗೂ ಸಮಬಾಳು, ಸರ್ವರಿಗೂ ಸಮಪಾಲು" ಎನ್ನುವ ಉದಾತ್ತ ಧ್ಯೇಯ ಈ ಅರ್ಥವ್ಯಾಪ್ತಿಯಲ್ಲಳವಟ್ಟಿದೆ. ಅಂದರೆ ವೈಯಕ್ತಿಕ ಬುದ್ಧಿ ಶಕ್ತಿಯ ಸಾಮರ್ಥ್ಯವೆಂದರ್ಥೈಸಬೇಕು. ಆಗ ಅದು ಮಾನವನ ಸ್ವತಂತ್ರ ಬಾಳಿನ ತಾರಕ ಶಕ್ತಿಯ ಸಂಕೇತವೇ ಹೊರತು ಮಾರಕ ಶಕ್ತಿಯ ಸಂಮೋಹಕ ಮಂತ್ರವಲ್ಲ. ಈ ದೃಷ್ಟಿಯಿಂದ ಹಿಂದಿನ ಮೂರು ದಶಕವನ್ನು ಪರ್ಯಾಲೋಚಿಸಿದಾಗ; ಸ್ವಾರ್ಥ ಅಧಿಕಾರ ಲಾಲಸೆ, ಅಧಿಕಾರ ದುರಪಯೋಗದ ಮನಃಪ್ರವೃತ್ತಿ ಬಹುಮಟ್ಟಿಗೆ ಬೆಳೆದು ಬಂದಿರುವುದು ನಿಜಕ್ಕೂ ವಿಷಾದನೀಯ. ವ್ಯಕ್ತಿಯ ಮೂಲಭೂತ ತತ್ವಗಳ ರಕ್ಷಣೆಯ ರಕ್ಷಾಕವಚವಾದಾಗ ಹಿಂದೆ ಆದ ಹಲವು ಹುತಾತ್ಮರ ಆತ್ಮ ಯಜ್ಞಕ್ಕೆ ಸಾರ್ಥಕ್ಯ ದೊರೆತಂತಾಗುತ್ತದೆ. ಇತ್ತೀಚಿನ ರಾಜಕೀಯ ವಾತಾವರಣವನ್ನು ಗಮನಿಸಿದಾಗ ಶುಭೋದಯದ ಮುಂಬೆಳಕು ಗೋಚರಿಸಿದಂತಿದೆ. ಭರತ ವರ್ಷದ ಅಸಂಖ್ಯ ಮಾನವ ಕುಲಕೋಟಿಯ ಬಹುದಿನದ ಕನಸು ನನಸಾಗುವ ಹೆಗ್ಗುರುತು ಕಾಣತೊಡಗಿದೆ.

—'ದುಂಬಿ'

# ಅರಿವರಿತ ಶಿವಯೋಗಿ ಸಿದ್ಧರಾಮ

**ಅಣ್ಣ ಬಸವಣ್ಣನವರ ವಿಶ್ವಮಾನ್ಯ ತತ್ತ್ವಗಳನ್ನು ತನ್ನ ಬದುಕಿನಲ್ಲಿ ಅಳವಡಿಸಿಕೊಂಡು ಶರಣನಾಗಿ ಬದುಕಿ ಬಾಳಿದ ಸಿದ್ಧರಾಮನ ಸಂದೇಶ ನಿತ್ಯ ನೂತನ.**

**—ಸಿದ್ದಣ್ಣ ಲಂಗೋಟಿ.**

ಭಾರತ ಭೂಮಿ ಸಂತರ, ಶರಣರ, ಸಾಧಕರ, ಸಿದ್ಧರ, ರಸ ಋಷಿಗಳ ಪವಿತ್ರ ಬೀಡು. ಈ ಮಣ್ಣ ಹುಡಿಯಲ್ಲಿ ಅದೆಷ್ಟು ಚೇತನಗಳು ಹುದುಗಿ ಇಂದಿಗೂ ತಮ್ಮ ಶಕ್ತಿ ಬೀರುತ್ತಿವೆಯೋ ಜ್ಞಾನಿಗಳೇ ಬಲ್ಲರು. ಸತ್ಯ, ಶಾಂತಿ, ಪ್ರೇಮ, ಸಹಬಾಳ್ವೆಯ ಬಾಳನ್ನು ಬಾಳಲು ಕಲಿಸಿದ, ಬದುಕಿ ತೋರಿದ, ಶರಣರ ನಾಡಿದು.

ಎಂಟು ನೂರು ಸಂವತ್ಸರಗಳ ಹಿಂದೆ ಇಂದಿನ ವಿಶ್ವ ಜನತೆ ಕಣ್ತೆರೆದು ನೋಡಬೇಕಾದಂತಹ ಕ್ರಾಂತಿಯೊಂದು ಈ ನಾಡಿನಲ್ಲಿ ಜರುಗಿತು. ಆ ಮಹೋನ್ನತ ಕ್ರಾಂತಿಯ ನೇತಾರರು ವಿಶ್ವ ವಿಭೂತಿ, ಮಹಾನ್ ಪ್ರವಾದಿ ಧರ್ಮ ಪ್ರವರ್ತಕ ಬಸವಣ್ಣನವರು. ವರ್ಣ ಭೇದ, ವರ್ಗ ಭೇದ, ಆಶ್ರಮ ಭೇದ, ಲಿಂಗ ಭೇದಗಳಾದಿಯಾಗಿ ಸಮಾಜದ ಅನಿಷ್ಟ ಸಂಪ್ರದಾಯದ ಕಟ್ಟಳೆಗಳನ್ನು ಕಿತ್ತು ಹಾಕಿ ನಿತ್ಯ ನೂತನವಾದ ಸಮಾಜ ರಚನೆಯ ಕಾರ್ಯ ಮಾಡಿದರು. ಆ ಧೀರ ಚೇತನದ ಮಹಾಕಾರ್ಯಕ್ಕೆ ನಿಸ್ವಾರ್ಥದಿಂದ ತನು, ಮನ, ಧನ ಸವೆಸಿ ದುಡಿದು ಕೃತ ಕೃತ್ಯರಾದ ಜೀವಿಗಳು ಅನಂತ. ಆ ಮಹಂತನ ಬೆಳಗಿನಲ್ಲಿ ತಮ್ಮ ಬಾಳನ್ನು ಸಾರ್ಥಕ ಪಡಿಸಿಕೊಂಡ ಶರಣರು ಅಪರಿಮಿತ.

ಕಾಯಕ, ಕಲೆ, ಉಪಾಸನೆಗಳು ಒಂದು ಜನಾಂಗದ ಸೊತ್ತಲ್ಲ; ಒಂದು ಜಾತಿಯವರ ಸೊತ್ತೂ ಅಲ್ಲ. ಅಖಿಲ ಮಾನವ ಕುಲ ಕೋಟಿಯ ಸೊತ್ತು. ಆತ್ಮ-ಪರಮಾತ್ಮ ಸತ್ಯ ವಸ್ತುಗಳಲ್ಲಿ ನಂಬಿಕೆಯಿಟ್ಟು ಮುಕ್ತಿಗಾಗಿ ಹಂಬಲಿಸುವ ಮುಮುಕ್ಷುಗಳ ಸೊತ್ತು. ವಿಶ್ವಾತ್ಮನ ಮಕ್ಕಳಾಗಿ ವಿಶ್ವ ಕುಟುಂಬಿಗಳಾಗಿ ಬದುಕಬೇಕೆನ್ನುವವರಿಗೆ ಶರಣರು ತೋರಿದ ಮಾರ್ಗ ಇಂದಿಗೂ ನೂತನ.

ಬಸವಣ್ಣನವರು ಸ್ಥಾಪಿಸಿದ ಅನುಭವ ಮಂಟಪಕ್ಕೆ ನಾಡಿನ ಮೂಲೆ ಮೂಲೆಗಳಿಂದ ಆಗಮಿಸಿ, ಜಾತಿಯ ಕಟ್ಟನ್ನು ಕಿತ್ತು ಹಾಕಿ, ಧರ್ಮದ ಪ್ರಭೆಯಲ್ಲಿ ತೊಳಗಿ ಬೆಳಗಿದ ಶರಣರು ಅಸಂಖ್ಯಾತ "ಕೂಡಲ ಸಂಗನ ಶರಣರು ಅನುಪಮ ಚಾರಿತ್ರರು. ಅವರಿಗೆ ತೋರಲು ಪ್ರತಿಯಿಲ್ಲವೊ" ಎಂಬ ಬಸವಣ್ಣನವರ ವಾಣಿಯಂತೆ ಅಲ್ಲಿದ್ದ ಪ್ರತಿಯೊಬ್ಬ ಶರಣ-ಶರಣೆಯರು ನ್ಯಾಯ ನಿಷ್ಠುರಿಗಳು, ತತ್ವಾನುಯಾಯಿಗಳು. ಸತ್ಯಕ್ಕಾಗಿ ಸಂಪ್ರದಾಯವನ್ನು ಮೆಟ್ಟಿ ನಿಂತ ಸರ್ವಾಂಗ ಕಲಿಗಳು; ಸ್ವತಂತ್ರ ಧೀರರು. ಅಂತಹವರಲ್ಲಿ ಶಿವಯೋಗಿ ಸಿದ್ಧರಾಮೇಶ್ವರರೂ ಒಬ್ಬರು.

ಶೂನ್ಯ ಸಿಂಹಾಸನಾಧ್ಯಕ್ಷ ಅಲ್ಲಮಪ್ರಭುದೇವರ ಪ್ರಕಾರ ಸಿದ್ಧರಾಮನ ಸಾಧನೆ ಅಪಾರ. ಆತ ಬ್ರಹ್ಮರಂಧ್ರದಲ್ಲಿ ಅರಿವರಿತ ಶಿವಯೋಗಿ.

**ಕಾಯದೊಳಗೆ ಕಳಣವಿಲ್ಲ**
**ಪ್ರಾಣದೊಳಗೆ ಭಾವವಿಲ್ಲ**
**ಭಾವದೊಳಗೆ ಭ್ರಮೆಯಿಲ್ಲ**
**ನವನಾಳವೊಳಗೆ ಸುಳುಹು ಮುನ್ನಿಲ್ಲ**
**ಬ್ರಹ್ಮರಂಧ್ರದಲ್ಲಿ ಅರಿವರತ ಶಿವಯೋಗಿ**

**ಗುಹೇಶ್ವರನ ಶರಣ ಸಿದ್ಧರಾಮಯ್ಯ**
**ನಿನ್ನ ಕಂಡೆನ್ನ ಭವಂ ನಾಸ್ತಿಯಾಯಿತ್ತು ನೋಡಾ**

(ವಚನ ಸಾಹಿತ್ಯ ಸಂಗ್ರಹ-ಪುಟ 62)

ಈ ತೆರನಾಗಿ ಶಿವಯೋಗ ಸಾಮ್ರಾಟ್ ಪ್ರಭುದೇವರಿಂದ ಸ್ತುತಿಸಿಕೊಳ್ಳಲ್ಪಟ್ಟ ಸಿದ್ಧರಾಮ, ಹಿಂದೊಂದು ಕಾಲದಲ್ಲಿ ಶರಣ ತತ್ವವನರಿಯದ ಒಡ್ಡರಾಮನಾಗಿದ್ದ. ಶಿವಾಲಯಗಳ ನಿರ್ಮಾಣ ಮಾಡಿ, ಲಿಂಗ ಪ್ರತಿಷ್ಠೆ. ಕಾರ್ಯಗಳಲ್ಲಿಯೇ ನಿರತನಾಗಿ ಅಂತರಂಗದ ಅರಿವಿನಿಂದ ಬಹು ದೂರವಾಗಿದ್ದ. ಆತ ಅಂದು ಸೊನ್ನಲಾಪುರದಲ್ಲಿ ಮಾಡುತ್ತಿದ್ದುದು ಎಂತಹ ಕಾರ್ಯ ? ಪ್ರಭುದೇವರ ನುಡಿಯಲ್ಲೇ ಆಲಿಸೋಣ.

**ಕಲ್ಲ ಮನೆಯ ಮಾಡಿ ಕಲ್ಲ ದೇವರ ಮಾಡಿ**
**ಆ ಕಲ್ಲು ಮೇಲೆ ಕಡೆದಡೆ ದೇವರೆತ್ತ ಹೋದರೊ ?**
**ಲಿಂಗಪ್ರತಿಷ್ಠೆಯ ಮಾಡಿದವಂಗೆ ನಾಯಕ ನರಕ**
**ತಪ್ಪದು ಗುಹೇಶ್ವರಾ**

ಮರೆವಿನ ಸೃಷ್ಟಿಯ ಮಾನವ ಅರಿವಿನ ಸೃಷ್ಟಿಯ ಶರಣನಾಗಬೇಕು. ಅಂತಾಗಬೇಕಾದರೆ ದೇಹವೇ ದೇವಾಲಯವಾಗಿಸಿಕೊಳ್ಳಬೇಕು. ದೇಹವೇ ದೇಗುಲವಾದಾಗ ಬೇರೆ ದೇಗುಲಗಳನ್ನು ಕಟ್ಟಿಸುವ ಅವಶ್ಯಕತೆ ಇಲ್ಲ. ಮೌಢ್ಯದಿಂದ ಭೌತಿಕ ಜಗತ್ತಿನಲ್ಲಿಯೇ ಬದುಕಬೇಕೆಂದು ಬಯಸವವರಿಗೆ ಶರಣರು ಗಣಾಚಾರಿಗಳಾಗಿ ಅವರನ್ನು ಖಂಡಿಸಿ ಸದಾಚಾರವನ್ನು, ಲಿಂಗಾಚಾರವನ್ನು ಬೋಧಿಸುತ್ತಾರೆ. " ಗುಹೇಶ್ವರಾ .... ನೀನು ಕಲ್ಲಾದಡೆ ನಾನೇನಪ್ಪನಯ್ಯಾ " ಎಂದು ಪ್ರಭುದೇವರು ಕೇಳುತ್ತಾರೆ ಸ್ಥಾವರಕ್ಕಳಿವುಂಟು. ನಿತ್ಯ ನೂತನವಾದ ಪರಮ ಚೈತನ್ಯ ಜಂಗಮಕ್ಕೆ ಅಳಿವಿಲ್ಲ. ಇಂತಹ ಚರ ಜಂಗಮ ನೀನಾಗಬೇಕೆಂದು ಪ್ರಭುದೇವರು ಬಯಸುತ್ತಾರೆ. ಸಂಪ್ರದಾಯದ ಕರ್ಮಲತೆಯಲ್ಲಿಯೇ ಸಿಲುಕಿ ಮರೆವಿನ ಸೃಷ್ಟಿಯಲ್ಲಿ ಸಂಚರಿಸುತ್ತಿದ್ದ ಸಿದ್ಧರಾಮನಿಗೆ ಆಗ ಅರಿವಿನ ಸೃಷ್ಟಿಯ ಶರಣ ಪ್ರಭುದೇವರ ನುಡಿ ಸಮನಿಸಲಿಲ್ಲ.

ತಾಮಸಗುಣದ ಆವರಣದಲ್ಲಿದ್ದ ಸಿದ್ಧರಾಮನಿಗೆ ಸಾತ್ವಿಕ ಗುಣದ ಶಾಂತತೆ ಎಂತು ಸರಿ ಬಂದೀತು ? ಹಟಯೋಗದಿಂದ ಸಾಧಿಸಿದ್ದ ನೊಸಲ ಕಣ್ಣು ತೆರೆದು ರವಿಯನ್ನು ಮುಚ್ಚಿ ಹಾಕಲು ಬಯಸುವ ಮೇಘದ ತೆರದಿ ಪ್ರಯತ್ನಪಟ್ಟ. ಶಿವಯೋಗಿಯ ನಿಲುವಿನ ಮುಂದೆ, ಕಾಯಕಯೋಗಿಯ ವ್ಯಕ್ತಿತ್ವದ ಮುಂದೆ ಕರ್ಮಯೋಗಿಯ ಒಣ ಛಲ - ಹಮ್ಮು ನಿಲ್ಲಲಾಗಲಿಲ್ಲ. ಕೊನೆಗೆ ಪಶ್ಚಾತ್ತಾಪ ಪಟ್ಟ ಶರಣಾಗತಿಯಿಂದ ನಿಲ್ಲಲು ಪ್ರಭುದೇವರು ಆತನಿಗೆ ಜೀವ - ಕಾಯದ ಭೇದವ ಭೇದಿಸುವ ಉಪಾಯವ ಅರುಹಿ ಕರಸ್ಥಲದನುವಿನ (ಇಷ್ಟಲಿಂಗದ) ಮಹತಿಯ ಮನಗಾಣಿಸಲು ಕಲ್ಯಾಣಕ್ಕೆ ಕರೆತಂದರು.

ಬಸವ - ಚನ್ನಬಸವಣ್ಣಾದಿ ಶರಣರ ಸಂಗದಲ್ಲಿ ಚಿಜ್ಞಾನಿ ಬಸವಣ್ಣನಿಂದ, ಅರಿವನ್ನು ಪಡೆದು ಇಷ್ಟಲಿಂಗ ದೀಕ್ಷೆಯನ್ನು ಪಡೆದು ಶಿವಯೋಗಿಯಾಗಿ ಪರಿವರ್ತನೆಗೊಂಡ. (Spiritual Conversion)

**ಶ್ರೀ ಗುರು....ಚನ್ನ ಬಸವಣ್ಣನ ಕರುಣದಿಂದ**
**ಅಭ್ಯಾಸಯೋಗವನಲೆಗಳೆದು ಶಿವಯೋಗ**
**ದಲ್ಲಿ ನಿತ್ಯನಾಗಿ**
**ಭಕ್ತ ಮಾಹೇಶ್ವರ ಪ್ರಸಾದಿ ಪ್ರಾಣಲಿಂಗಿ**
**ಶರಣ ಐಕ್ಯವೆಂಬ**
**ಷಡುಸ್ಥಲಕ್ಕೆ ಅಧಿಕಾರಿಯಾದ, ಎನ್ನನವರ**
**ಸಲುಗೆಗೆ ಸಂದ**
**ಚನ್ನ ಬಸವಣ್ಣನ ಕೃಪೆ ಎನ್ನನಿಂತು ಮಾಡಿತ್ತು.**
**ಕಾಣಾ ಗುರುವೆ ಕಪಿಲ ಸಿದ್ಧಮಲ್ಲಿಕಾರ್ಜುನ.**

ಸಿದ್ಧರಾಮನ ಮೇಲೆ ಉಲ್ಲೇಖಿಸಿರುವ ವಚನ ನೋಡಿದಾಗ ಷಡುಸ್ಥಲ ಮಾರ್ಗ, ಆ ದರ್ಶನದ ಪಕ್ವತೆ ಅರ್ಥವಾದೀತು. ಹಟಯೋಗ - ರಾಜಯೋಗ - ಕರ್ಮಯೋಗಗಳನ್ನು ತನ್ನ ಬಲಿಷ್ಠ ತಪಸ್ಸಿನಿಂದ ಸಾಧಿಸಿ ಉರಿನೇತ್ರ ಪಡೆದ ಮಹಾನ್ ಸಿದ್ಧಿ ಪುರುಷನೂ ಶಿವಯೋಗಕ್ಕೆ ಮಣಿಯಲೇ ಬೇಕಾಯ್ತು. ಆತನ ಇಲ್ಲಿಯವರೆಗಿನ ಸಾಧನೆಯ ಕೊರತೆಗಳು ಇಂದು ತುಂಬಿ ಪರಿಪೂರ್ಣವಾದವು.

(10 ನೇ ಪುಟನೋಡಿ.)

# ರೈಝೋಬಿಯಂ ಜೀವಾಣು ಬಳಸಿ-ಹೆಚ್ಚು ಬೆಳೆ ಬೆಳೆಸಿ

ರೈಝೋಬಿಯಂ ಜೀವಾಣು ಬಳಕೆಯಿಂದ ಸಾರಜನಕ ಸ್ಥಿರೀಕರಣ [Fixation of Nitrogen] ಸಾಧ್ಯ. ಬೆಳೆಯ ಇಳುವರಿ ಹೆಚ್ಚಿಸುವಲ್ಲಿ ಇದೊಂದು ಉಪಯುಕ್ತ ಕ್ರಮವಾಗಿದೆ.

—ಅಮೃತರಾಜ ಶಂ. ಶಿರವಾಳ

ರೈಝೋ ಜೀವಾಣು, ವಾಯುವಿನಲ್ಲಿರುವ [30,000 ಟನ್ನು] ಸಾರಜನಕವನ್ನು ಸ್ಥಿರೀಕರಿಸುವುದು. ಇದು ದ್ವಿದಳ ಬೆಳೆಗಳಲ್ಲಿ ಮಾತ್ರ ಸಾಧ್ಯವಿದೆ. ಏಕಾಣುಜೀವಿ ಸಹಜೀವತ್ವದಿಂದ ನೈಸರ್ಗಿಕವಾಗಿ ಸ್ಥಿರಗೊಂಡ ಸಾರಜನಕ ಬೆಳೆಯ ಇಳುವರಿಯನ್ನು ಹೆಚ್ಚಿಸಲು ಸಹಾಯಕಾರಿಯಾಗಿರುವುದು. ಆದ ಕಾರಣ ಬೇಳೆಕಾಳು ಬೆಳೆಗಳ ಬೇರುಗಂಟುಗಳಲ್ಲಿ ಕಂಡುಬರುವ ಈ ರೈಝೋಬಿಯಂ ಜೀವಾಣು ಮತ್ತು ಸಸ್ಯಗಳ ನಡುವಣ ಪ್ರಕೃತಿದತ್ತ ಸಹಜೀವನ ಸಂಬಂಧವು ರೈತರಿಗೊಂದು ವರವಾಗಿರುವುದು. ಇದರಿಂದ ಕೇವಲ ಉತ್ಪಾದನೆಯಲ್ಲದೆ ಮಣ್ಣಿನ ಫಲವತ್ತತೆಯನ್ನೂ ಕಾಪಾಡಿದಂತಾಗುವುದು. ದ್ವಿದಳ ಬೆಳೆಗಳನ್ನು ಬೆಳೆದ ಭೂಮಿಯಲ್ಲಿ ಏಕದಳ ಧಾನ್ಯಗಳ ಇಳುವರಿ ವೃದ್ಧಿಸಿದ ಪ್ರಾಯೋಗಿಕ ಸಾಧ್ಯತೆಗಳು, ಫಲವತ್ತತೆಗೊಂದು ನಿದರ್ಶನವಾಗಿರುವುದು. ದ್ವಿದಳ ಧಾನ್ಯ ಸದ್ಯಕ್ಕೆ 8 ಲಕ್ಷ ಟನ್ ಪ್ರತಿ ವರುಷದ ಬೇಡಿಕೆಯಾಗಿರುವುದು. ಆದರೆ ಕೇವಲ 4·64 ಲಕ್ಷ ಟನ್ ಮಾತ್ರ 10·7 ಲಕ್ಷ ಹೆಕ್ಟೇರದಿಂದ ನಮ್ಮ ರಾಜ್ಯದಲ್ಲಿ ಪಡೆಯಲಾಗಿದೆ.

ಇಂಧನದ ಕೊರತೆ (ವಿದ್ಯುಚ್ಛಕ್ತಿ, ನ್ಯಾಫ್ತಾ), ಸಾರಜನಕ ಗೊಬ್ಬರ ಕೊರತೆ ಮತ್ತು ಭಯಾನಕ ಬೆಲೆಯಿಂದ ತತ್ತರಿಸಿದ್ದ ರೈತರಿಗೆ ಇದೊಂದು ಸುಲಭ ಸಾಧನವಾಗಿರುವುದು. ಪ್ರತಿ ಹೆಕ್ಟೇರದಲ್ಲಿ ವರ್ಷಕ್ಕೆ 300 ಕೆ. ಜಿ. ವರೆಗೂ ಸಾರಜನಕ ಸ್ಥಿರೀಕರಿಸಬಹುದು (ಹ್ಯಾಂಜೆಲ್ ಮತ್ತು ನಾರಿಸ್ 1962). ಬೆಳೆಯಿಂದ ಬೆಳೆಗೆ ವಿವಿಧ ಪ್ರಮಾಣದಲ್ಲಿ ಸ್ಥಿರೀಕರಣ ಹೊಂದಿರುವುದು. ಕ್ಲೋವರ 50–200, ಬಟಾಣಿ 30–140 ಶೇಂಗ 88, ಮತ್ತು ಇತರ ಲೆಗ್ಯುಮಗಳಲ್ಲಿ 10–550 ಕಿ. ಗ್ರಾಂ. ಪ್ರತಿ ಹೆಕ್ಟೇರದಲ್ಲಿರುವ ಪ್ರತಿ ಬೆಳೆಯಿಂದ ದೊರೆತಿರುವುದು (ಸ್ಪೆಕ್ಟರ್ 1956). ದ್ವಿದಳ ಬೆಳೆಗಳಿಂದ (Pulses) ಪ್ರತಿ ವರುಷ ಪ್ರತಿ ಹೆಕ್ಟೇರದಲ್ಲಿ 60 ಕೆ. ಜಿ. ಸಾರಜನಕ ಉತ್ಪತ್ತಿಯಾಗಿರುವುದಾಗಿ ಕಂಡು ಬಂದಿದೆ (ಪೊಸ್ಟಗೇಟ 1974). ತೊಗರಿಯ ಸ್ಥಿರೀಕರಣವು ಪ್ರತಿ ಬೆಳೆಗೆ ಹೆಕ್ಟೇರಿಗೆ 96–150 ಕೆ. ಜಿ ಸಾರಜನಕ ಉತ್ಪತ್ತಿಯಾಗಿರುವುದಾಗಿ ಕಂಡು ಬಂದಿದೆ. (ಡಾ॥ ರಾ ಬಿ. ಪಾಟೀಲ್ 1975) ಈ ಸಾರಜನಕ ಸ್ಥಿರೀಕರಣವು ಮಣ್ಣಿನಿಂದ ಮಣ್ಣಿಗೆ ಒಂದೇ ಜಾತಿಯ ಬೆಳೆಯಿಟ್ಟಾಗಲೂ ಬೇರೆ ಬೇರೆಯಾಗಿರುವುದು. ಅಲ್ಲದೆ ಒಂದೇ ಬೆಳೆಯಲ್ಲಿ ತಳಿಯಿಂದ ತಳಿಗೂ ವಿವಿಧವಾಗಿರುವುದು. ಕಾರಣ ರೈಝೋಬಿಯಂ ಸಹಜೀವನಕೆ ಆತಿಥೇಯ (Host) ಸಸ್ಯವು ಪ್ರಮುಖವಾಗಿರುವುದು.

ಈ ಎಲ್ಲ ಕಾರಣಗಳಿಗೂ ಅನುಕೂಲವಾಗುವಂಥ 'ಮಿಶ್ರರೈಝೋಬಿಯಂ ಕಲ್ಚರ್' ಕಂಡು ಹಿಡಿಯಬೇಕಾದುದು ವಿಜ್ಞಾನಿಗಳ ಆದ್ಯ ಕರ್ತವ್ಯವಾಗಿರುವುದು. ಈ ದಿಶೆಯಲ್ಲಿ ಈಗಾಗಲೇ ಸಂಶೋಧನೆ ಸಾಗಿದ್ದು ಕೆಲವೊಂದು ಉಪಯುಕ್ತವಾದ ಮಿಶ್ರರೈಝೋ

ಯನ್ನು ರೈತರಿಗಾಗಿ ಬಿಡುಗಡೆ ಮಾಡಿರುವರು. ಆತಿಥೇಯ ಬೆಳೆಗಳ ಬೇರಿನಲ್ಲಿ ಗಂಟುಗಳನ್ನು ವೃದ್ಧಿಸಲು ಹಲವಾರು ರೈಜೋಬಿಯಂ ಸ್ಥಾಪಕ (ಇನೊಕ್ಯುಲೇಶನ್) ಗಳನ್ನು ತಯಾರಿಸಿ ಇವು ಮತ್ತು ಬೆಳೆಗಳ ಸಹಜೀವನ ದಿಂದ (ಸಿಂಬಿಯಾಸಿಸ್) ನೈಸರ್ಗಿಕ ಸಾರಜನಕವನ್ನು ಸ್ಥಿರೀಕರಿಸಲು ಸತತ ಪ್ರಯತ್ನಗಳು ನಡೆಯುತ್ತಲೇ ಇರುವುವು. ರೈಜೋಬಿಯಂ ಸ್ಥಾಪಕದಿಂದ ಶೇಕಡ 10 ರಿಂದ 80 ರವರೆಗೆ ಇಳುವರಿ ಹೆಚ್ಚಾಗಿರುವುದೊಂದು ಲಾಭದಾಯಕ ಕೃಷಿಯಾಗಿದೆ ಮತ್ತು ಕಾಳುಗಳಲ್ಲಿ ಸಸಾರಜನಕ (ಪ್ರೊಟೀನ್) ಸಹ ವೃದ್ಧಿಸಿರುವುದು. ಮಣ್ಣಿನ ಕೊಳೆಯಿಂದ ಸಾರಜನಕದ ಅಂಶವು ಹೆಚ್ಚಾಗಿ ಫಲವತ್ತತೆಯನ್ನೂ ಕಾಪಾಡಲು ಸಹಕಾರಿಯಾಗಿರುವುದು. ರೈಜೋಬಿಯಂ ಸ್ಥಾಪಿತ ಲೆಗ್ಯೂಮು ಬೆಳೆದನಂತರ ಆಹಾರ ಧಾನ್ಯಗಳನ್ನು ಬೆಳೆದಾಗ ಇದರ ಇಳುವರಿ ಕೂಡಾ ಹೆಚ್ಚಾದ ನಿದರ್ಶನಗಳಿವೆ. ಉದಾಹರಣೆಗೆ ರೈಜೋಬಿಯಂ ಸ್ಥಾಪಿತ ಸೋಯಾ ಅವರೆಯನ್ನು ಬೆಳೆದನಂತರ ಗೋಧಿ ಎರಡನೆಯ ಬೆಳೆಯಾಗಿ ಬೆಳೆದಾಗ ಶೇಕಡ 29ರಷ್ಟು ಇಳುವರಿ ಹೆಚ್ಚಾದುದು ತಿಳಿದು ಬಂದಿದೆ.

**ರೈಜೋಬಿಯಂ ಬೀಜೋಪಚಾರ ವಿಧಾನ :–**

1. ಒಂದು ಎಕರೆಗೆ ಬೇಕಾದ ಬಿತ್ತನೆ ಬೀಜವನ್ನು ನೀರಿನಲ್ಲಿ 10 ನಿಮಿಷ ನೆನೆ ಹಾಕಿರಿ ನಂತರ ನೀರನ್ನು ಬಸಿದು ತೆಗೆಯಿರಿ.

2. ಶೇಕಡಾ 10ರ ಬೆಲ್ಲದ ಅಥವಾ ಸಕ್ಕರೆಯ ಪಾಕವನ್ನು ತಯಾರಿಸಿ. ಅಂದರೆ ಅರ್ಧ ಲೀಟರ್ ನೀರಿಗೆ 50ಗ್ರಾಂ ಬೆಲ್ಲ ಅಥವಾ ಸಕ್ಕರೆ ಸೇರಿಸಿ 15 ನಿಮಿಷ ಕುದಿಸಿ ಪಾಕ ತಯಾರಿಸಿ. ನಂತರ ತಣ್ಣಗಾಗಲು ಅವಕಾಶ ಕೊಡಿ.

3. ಒಂದು ಎಕರೆ ಪ್ರದೇಶಕ್ಕೆ ಸಾಕಾಗುವ 75 ಗ್ರಾಂ. ಬೆಳೆಗೆ ತಕ್ಕ ರೈಜೋಬಿಯಂ ಜೀವಾಣು (ಕಲ್ಚರ್)ವನ್ನು ಪಾಕಕ್ಕೆ ಸೇರಿಸಿ.

4. ಈ ರೈಜೋಬಿಯಂ ಮಿಶ್ರಿತ ಪಾಕವನ್ನು ಒಂದು ಎಕರೆಗೆ ಬೇಕಾಗುವ ಬೀಜಕ್ಕೆ ಸುರವಿ ಚೆನ್ನಾಗಿ ಮಿಶ್ರ ಮಾಡಿ. ಬೀಜದ ಮೇಲ್ಭಾಗಕ್ಕೆ ಅಂಟಿಕೊಳ್ಳಲು ಪಾಕವು ಸಹಾಯಕಾರಿಯಾಗಿರುವುದರಿಂದ ಬೇಕಾದಷ್ಟು ಪ್ರಮಾಣವನ್ನು ಮಾತ್ರ ಬೀಜಕ್ಕನುಗುಣವಾಗಿ ತಯಾರಿಸಿಕೊಳ್ಳಬಹುದು. ಪಾಕ ಹೆಚ್ಚಾಗಿದ್ದರೆ ಮಣ್ಣಿನಲ್ಲಿ ಇರುವೆಗಳಾಗುವ ಸಂಭವವಿರುವುದು.

5. ಲೇಪಿಸಿದ ಬಿತ್ತನೆ ಬೀಜವನ್ನು ಸ್ವಚ್ಛವಾದ ಬಟ್ಟೆಯ ಮೇಲೆ ಹರಡಿ ನೆರಳಿನಲ್ಲಿ ಒಣಗಿಸಿ. ಬಿತ್ತನೆಯನ್ನು ಬೆಳಿಗ್ಗೆ ಅಥವ ಸಾಯಂಕಾಲ ಮಾಡಿ. ಸೂರ್ಯರಶ್ಮಿ ತಾಕದಂತೆ ನೋಡಿಕೊಳ್ಳಿ.

**ಗಮನಿಸಬೇಕಾದ ಕೆಲವೊಂದು ಮುಖ್ಯಾಂಶಗಳು ಹೀಗಿವೆ:–**

ಸಾರಜನಕ ಸ್ಥಿರೀಕರಣವಾಗುವುದರಿಂದ ಕೃತಕ ಸಾರಜನಕ ಗೊಬ್ಬರಗಳನ್ನು ಉಪಯೋಗಿಸುವ ಅವಶ್ಯಕತೆ ಇರುವುದಿಲ್ಲ. ಈ ಗೊಬ್ಬರ ಉಪಯೋಗಿಸಿದರೆ ರೈಜೋಬಿಯಂ ಜೀವಾಣುಗಳ ಸಾರಜನಕ ಸ್ಥಿರೀಕರಣಕಾರ್ಯವು ತೃಪ್ತಿಕರವಾಗಿರುವುದಿಲ್ಲ ರಂಜಕ ಮತ್ತು ಪೊಟ್ಯಾಷ್ ಗೊಬ್ಬರಗಳನ್ನು ಮಾತ್ರ ಶಿಫಾರಸು ಮಾಡಿದ ಪ್ರಮಾಣದಲ್ಲಿ ಉಪಯೋಗಿಸಿ. ರೈಜೋಬಿಯಂ ಜೀವಾಣುವಿನ ಪ್ಯಾಕೇಟಿನ ಮೇಲೆ ನಮೂದಿಸಿರುವ ನಿಗದಿಯಾದ ಅವಧಿಯೊಳಗಾಗಿ ಈ ಕಲ್ಚರನ್ನು ಬಳಸಿ. ಹಳೆಯ ಕಲ್ಚರದಲ್ಲಿ ರೈಜೋಬಿಯಂ ಸಂಖ್ಯೆ ಕಡಿಮೆಯಾಗಿರುವುದು. ಇದನ್ನು ರೆಫ್ರಿಜರೇಟರ ಅಥವಾ ತಣ್ಣನೆಯ ಸ್ಥಳದಲ್ಲಿ ಮಾತ್ರ ಶೇಖರಿಸಬಹುದು.

ರೈಜೋಬಿಯಂ ಸ್ಥಾಪಿತ ಶೇಂಗಾ ಬೆಳೆಗೆ ಬೂಷ್ಟು ನಾಶಕ ಕ್ಯಾಪ್ಟಾನ್, ಥಿರೆಸಾನ್, ಬ್ರಾಸಿಕಲ್ ಮತ್ತು ಮಣ್ಣಿನ ಕೀಟನಾಶಕಗಳಾದ ಕಾರ್ಬೊಫುರಾನ್ ಥಿಮೆಟ್, ಡಾಸಿಸ್ಟೆಟ್ ಹೆಪ್ಟಾಕ್ಲೋರ್ ಮೊದಲಾದವುಗಳನ್ನು ಉಪಯೋಗಿಸಿದಾಗಲೂ ಶೇಂಗ ಇಳುವರಿ ಕಡಿಮೆಯಾಗಿರುವುದಿಲ್ಲ ಮತ್ತು ಬೇರಿನ ಗಂಟುಗಳ ಸಂಖ್ಯೆಯಲ್ಲಿ ಕಡಿಮೆಯಾಗಿರುವುದಿಲ್ಲವೆಂದು ತಿಳಿದು ಬಂದಿದೆ. ಸೋಯಾ ಅವರೆಯಲ್ಲಿ ನಿಮ್ಯಾಟೋಡ್ ನಾಶಕ ಫೆನ್‌ಸಲ್ಫೊಥೈಯಾನ್ ಮತ್ತು ಕಳೆನಾಶಕ ಅಲಾಕ್ಲೋರ್‌ಗಳನ್ನು ಉಪಯೋಗಿಸಿದಾಗಲೂ ಬೇರಿನ ಗಂಟು ಮತ್ತು ಸೋಯಾ ಅವರೆ ಇಳುವರಿಯಲ್ಲಿ ಕಡಿಮೆಯಾಗಿರುವುದಿಲ್ಲವೆಂದು ತಿಳಿದು ಬಂದಿದೆ. ಕಾರಣ

ರೈಜೋಬಿಯಂ ಜೀವಾಣುಗಳ ಸ್ಥಾಪಕದೊಂದಿಗೆ ರೋಗ ನಾಶಕ, ಕೀಟನಾಶಕ, ಕಳೆನಾಶಕಗಳನ್ನು ಉಪಯೋಗಿಸಬಹುದಾಗಿದೆ.

ನಮ್ಮ ಕರ್ನಾಟಕ ರಾಜ್ಯದಲ್ಲಿ ಇದು ದೊರೆಯುವ ಕೆಲವೊಂದು ಸ್ಥಳಗಳು ಈ ರೀತಿಯಾಗಿ ಇರುವುವು.

1. ಪ್ರೊಫೆಸರ್, ಅಗ್ರಿಕಲ್ಚರಲ್ ಮೈಕ್ರೊಬಯಾಲಜಿ, ಕೃಷಿವಿಶ್ವವಿದ್ಯಾನಿಲಯ ಹೆಬ್ಬಾಳ, ಬೆಂಗಳೂರು-560024

2. ವಿಂಪೆಕ್ಸ್ ಬಯೋಫರ್ಟಿಲೈಸರ್ಸ್ ನಂ. 84, vi ಮುಖ್ಯ ಬೀದಿ, ಮಲ್ಲೇಶ್ವರ ಬೆಂಗಳೂರು-560055 (ತಯಾರಕರು)

ಹಂಚಿಕೆದಾರರು : ರಂಗಸ್ವಾಮಿ ಮತ್ತು ಕಂ. 75, ಕಲಾಸಿಪಾಳ್ಯಂ ಬೆಂಗಳೂರು–560002.

3. ಹೀಲ್ಡ್ ಬಯೋಫರ್ಟಿಲೈಸರ್ಸ್, ಅಗ್ರೋಬಯೋ ಲ್ಯಾಬೊರೇಟರೀಸ್ 95, ಎಸ್. ಬಿ. ಎಮ್. ಕಾಲನಿ ಹೆಬ್ಬಾಳ, ಬೆಂಗಳೂರು–560024.

4. ನೈಟ್ರೊಬ್ಯಾಕ್,
ಬಯೋಕಲ್ಚರ್ಸ್ ಮ್ಯಾನುಫ್ಯಾಕ್ಚರಿಂಗ್ ಲ್ಯಾಬೊರೇಟರೀಸ್ 79, ಲ್ಯಾವೆಲ್ಲೆ ರೋಡ್ (ಅಥವಾ ಪೀಣ್ಯ 562139) ಬೆಂಗಳೂರು–560001.

ಹಂಚಿಕೆದಾರರು :– ಮಹಾಜನ ಸೇಲ್ಸ್ ಕಾರ್ಪೊರೇಶನ್ 27, ವಿಕ್ಟೋರಿಯಾ ರೋಡ್, ಬೆಂಗಳೂರು–560001. ಮತ್ತು
ಫ್ಲೋರಾ ಕೆಮಿಕಲ್ಸ್ '8, ರೇಸ್‌ಕೋರ್ಸ್‌ರೋಡ ಬೆಂಗಳೂರು 560001.

ಕೃಷಿ ವಿಶ್ವವಿದ್ಯಾನಿಲಯದಿಂದ ಉಚಿತವಾಗಿ ಪ್ರಯೋಗಕ್ಕಾಗಿ ಕಳಿಸಿಕೊಡುವರು. ಇತರ ತಯಾರಕರು ಮಾರಾಟ ಮಾಡುವ ಬೆಲೆ ಒಂದು ಪ್ಯಾಕೆಟಿಗೆ(75–150ಗ್ರಾಂ) ಸುಮಾರು ರೂ. 5/- ರಂತೆ ಇರುವುದು. ರೈಜೋಬಿಯಂ ಕಲ್ಚರದ ಬಳಕೆಯು ರಷ್ಯಾ, ಅಮೇರಿಕಾ, ಇಂಗ್ಲೆಂಡ್, ಫ್ರಾನ್ಸ್, ಆಸ್ಟ್ರೇಲಿಯಾ ಮೊದಲಾದ ದೇಶಗಳಲ್ಲೂ ಪಸರಿಸಿದೆ.

ಪ್ರಸ್ತುತ ಲೇಖನದ ಸಾರಾಂಶವೆಂದರೆ ಬೆಳೆಗಳ ಬೇರು ಗಂಟುಗಳಲ್ಲಿರುವ ರೈಜೋಬಿಯಂ ಜೀವಾಣು ಮತ್ತು ಸಸ್ಯಗಳ ನಡುವಣ ನೈಸರ್ಗಿಕ ಸಹಜೀವನ ಸಂಬಂಧವು ಸಾರಜನಕ ಸ್ಥಿರೀಕರಣದಲ್ಲಿ ಮತ್ತು ಮಣ್ಣಿನ ಫಲವತ್ತತೆಯನ್ನು ಕಾಪಾಡುವುದರಲ್ಲಿ ರೈತರಿಗೊಂದು ವರಪ್ರದಾನವಾಗಿ ಪರಿಣಮಿಸಿದೆ ಎಂಬುದನ್ನು ವಿವರಿಸಲಾಗಿರುವುದು. ★

---

(7 ನೇ ಪುಟದಿಂದ)

ಇಂದಿನ ಶುಷ್ಕ ವಿಚಾರ ಪರವಶತೆಗೆ ಒಳಗಾದ ಅನೇಕರು ಒಳಗಡೆ ಆತ್ಮಲಿಂಗವಿರುವಾಗ, ಬಹಿರಂಗದಲ್ಲಿ ಇಷ್ಟಲಿಂಗ ಏಕೆ ? ಎಂದು ಕೇಳುವರು. ಇಂಥಹ ಮೂಢ ವಿಚಾರವಾದಕ್ಕೆ ಏನನ್ನಬೇಕೋ ತಿಳಿಯದು. ತಾಯಿಯ ಹೃದಯದಲ್ಲಿ ವಾತ್ಸಲ್ಯ ಮೂರ್ತಗೊಂಡಿರಬಹುದು ಅದು ಕಾಣಬೇಕಾದರೆ ಸಾಕಾರದ ಮಗುವಿದ್ದಾಗ, ಆ ಮಗುವನ್ನು ತಾಯಿ ಮುದ್ದಿಸುವ ಕ್ರಿಯೆಯನ್ನು ಕಾಣುವಾಗ ವಾತ್ಸಲ್ಯ ನೋಡಬಹುದು. ವಾತ್ಸಲ್ಯ ನಿರಾಕಾರ. ಮುದ್ದಿಸುವುದು ಸಾಕಾರ ಸಾಕಾರವಿಲ್ಲದೇ ನಿರಾಕಾರದ ಅರಿವು ಜ್ಞಾನ ಸಾಧ್ಯವಾಗದು. ಆದ್ದರಿಂದ ಬಸವಣ್ಣನವರು ಹೇಳುತ್ತಾರೆ.

ಅಂತರಂಗದಲ್ಲಿ ಅರಿವಾದಡೇನಯ್ಯಾ
ಬಹಿರಂಗದಲ್ಲಿ ಕ್ರಿಯೆಯಿಲ್ಲದನ್ನಕ್ಕ ?
ದೇಹವಿಲ್ಲದಡೆ ಪ್ರಾಣಕ್ಕೆ ಆಶ್ರಯವುಂಟೆ ?
ಕನ್ನಡಿ ಇಲ್ಲದಿದ್ದಡೆ ತನ್ನ ಮುಖವ ಕಾಣಬಹುದೇ?
ಸಾಕಾರ - ನಿರಾಕಾರ ಏಕೋ ದೇವ ನಮ್ಮ
ಕೂಡಲ ಸಂಗಮದೇವ.

ಬಸವಣ್ಣನವರ ವಿಶ್ವಮಾನ್ಯ ತತ್ವಗಳನ್ನು ಬದುಕಿನಲ್ಲಿ ಅಳವಡಿಸಿಕೊಂಡ ಶರಣನಾಗಿ ಬದುಕಿದ ಸಿದ್ಧರಾಮ. ಆತನ ವಿಶ್ವ ಸಂದೇಶ ತ್ರಿಕಾಲವೂ ನಿತ್ಯ ನೂತನ. "ವೇದಧರ್ಮ ಮಾತೆಯನ್ನು ದೇವರೆಂದು ಸಾರಿದರೆ ವಚನ ಧರ್ಮ ಹೆಣ್ಣನ್ನೇ ದೇವರೆಂದು ಸಾರಿತು" ಎಂದು ಪ್ರಸಿದ್ಧ ವಿದ್ವಾಂಸರಾದ ಎಂ. ಆರ್. ಶ್ರೀಯವರು ಬರೆಯುತ್ತಾರೆ.

ಹೆಣ್ಣು ಹಣ್ಣಲ್ಲ, ಹೆಣ್ಣು ರಕ್ಕಸಿಯಲ್ಲ.
ಹೆಣ್ಣು ಪ್ರತ್ಯಕ್ಷ ಕಪಿಲಸಿದ್ಧ ಮಲ್ಲಿಕಾರ್ಜುನ ನೋಡಾ

ತನ್ನ ಬಿಟ್ಟು ಅನ್ಯ ಹಿತವ ನೋಡಿದಡೆ ಕೂಡಿಕೊಂಬ ನಮ್ಮ ಕಪಿಲಸಿದ್ಧ ಮಲ್ಲಿಕಾರ್ಜುನಾ— ಎಂಬ ನುಡಿಯಲ್ಲಿ ಲೋಕ ಕಲ್ಯಾಣದ ಸಂದೇಶವನ್ನು ಕಾಣುತ್ತೇವೆ. ಇಂತಹ ಪರಮ ಜ್ಞಾನವನ್ನು ಪಡೆದ ಶಿವಯೋಗಿ - ಆತ ಪಂಚ ಪರುಷ. ಆತನ ನೋಟವೆಲ್ಲವೂ ಶಿವಮಯ, ಉಸಿರು ಶಿವಜ್ಞಾನದ ಪರಿಮಳ, ನುಡಿಗಳು ಶಿವ ಮಹಿಮೆಯ ಗಡಣ, ಆತನ ಸಹವಾಸ ಶಿವಮಯ ಪ್ರಪಂಚ. —

# ಬೆ ಳ ಕು

—ಮಂಜುಳಾ ಪುಟ್ಟರಾಮಯ್ಯ

> ಕೇವಲ ಹಣವೊಂದೇ ಸುಖದ ಸಾಧನವೆಂದು ತಿಳಿದಿದ್ದ ಗೌರಿ ಗೆಳತಿ ಕಲ್ಯಾಣಿಯ ಬಾಳಿನಿಂದ ಪಡೆದ ಬೆಳಕು ಅವಳ ಮನದ ಕತ್ತಲೆಯನ್ನು ದೂರಾಗಿಸಿತು.

"ಶಿವ ಶಿವಾ, ಏನು ಸಂಸಾರವಪ್ಪ ಇದು!" ಸಾಕು ಬೇಕಾಗಿಬಿಟ್ಟಿತು ಗೌರಿಗೆ. ದಿನಬೆಳಗಾದರೆ ಇದೇ ಗೋಳು, ಯಾವತ್ತು ತಾನೆ ಕೈತುಂಬ ದುಡ್ಡಿತ್ತು ತನ್ನ ಹತ್ತಿರ? ತಿಂಗಳಿಗೊಮ್ಮೆ ಸಂಬಳ ಬರುವುದೊಂದೇ ಸರಿ, ಆದರೆ ಹಣವೇನೋ ನೀರಿನಂತೆ ಅದಕ್ಕೆ ಇದಕ್ಕೆ ಎಂದು ಖರ್ಚಾಗಿ ಬಿಡುತ್ತಿತ್ತು. ಯಥಾ ಪ್ರಕಾರ ತಿಂಗಳ ಕೊನೆಯಲ್ಲಿ ಲಾಟರಿ. ಪಕ್ಕದ ಮನೆ ಪಂಕಜ ಇದ್ದಾಳಲ್ಲಾ, ಅವಳದು ಎಷ್ಟು ಮುದ್ದಾದ ಸಂಸಾರ ದಿನಾ ಸಾಯಂಕಾಲ ಗಂಡನೊಡನೆ ಸ್ಕೂಟರಿನಲ್ಲಿ ಸವಾರಿ, ದಿನಕ್ಕೊಂದು ಬಗೆಯ ಅಲಂಕಾರ, ಬಣ್ಣ ಬಣ್ಣದ ಸೀರೆಗಳನ್ನುಟ್ಟು ಮೈ ಮರೆತು ಮೆರೆಯುತ್ತಾಳೆ.... ಅಬ್ಬಾ, ಅನುಭವಿಸಲೆಂದೇ ಹುಟ್ಟಿದವಳು ಅವಳು. ನನ್ನ ಹಾಗೆ ಸೋಡು ಮುಖ ಹಾಕಿ ಕೊಂಡೇನೂ ಕುಳಿತಿರಬೇಕಾಗಿಲ್ಲ ಅವಳೇ ಅದೃಷ್ಟಶಾಲಿ. 'ಹಾಯ್' ನಿಟ್ಟುಸಿರು ಬಿಟ್ಟಳು ಗೌರಿ ಅಸಹನೆಯಿಂದ.

ತನ್ನ ತವರು ಮನೆಯಲ್ಲಿ ಎಷ್ಟೊಂದು ಸುಖವಾಗಿದ್ದಳಲ್ಲಾ ಅವಳು. ಮನೆಯವರಿಗೆಲ್ಲಾ ಅಚ್ಚುಮೆಚ್ಚಾಗಿ ರಾಣಿಯಂತಿದ್ದವಳು ಗೌರಿ, ಅವಳಲ್ಲಿದ್ದಷ್ಟು ಸೀರೆ, ಒಡವೆಗಳು ಆಗ ಅವಳ ಸ್ನೇಹಿತೆಯರಲ್ಲಿ ಯಾರಿಗೂ ಇರಲಿಲ್ಲ ಈಗ ಗಂಡ ತೆಗೆದುಕೊಡುವುದಿರಲಿ, ಇದ್ದ ಒಡವೆಯೇ ದುಡ್ಡಾಗಿ ಕರಗಿ ಹೋಯಿತು ಅವಳ ಆಶಾಗೋಪುರವೇ ಬಿದ್ದು ನೆಲಸಮವಾಯಿತು.

ಗೌರಿಯ ಗಂಡ ಶಂಕರ್‌ಗೆ, ಅವನ ಕಂಪನಿಯಲ್ಲಿ ನಡೆದ ಭಾರಿ ನಷ್ಟವೊಂದರ ಫಲವಾಗಿ ಕೆಲಸ ಹೋಗಿ, ಈಗ ಬೇರಾವುದೋ ಸಣ್ಣ ಕಂಪನಿಯೊಂದರಲ್ಲಿ ಕೇವಲ ಗುಮಾಸ್ತೆಯಾಗಿದ್ದ. ಅವನು ತರುವ ಅಲ್ಪ ಸಂಬಳದಲ್ಲಿ ಮನೆಯ ಖರ್ಚುಗಳೆಲ್ಲಾ ಕಳೆದು ಬಾಕಿ ಉಳಿಯುತ್ತಲೇ ಇರಲಿಲ್ಲ. ದುಡ್ಡಿನ ಮುಗ್ಗಟ್ಟಿನಿಂದಾಗಿ ಸದಾ ತಲೆ ಭಾರವೆನಿಸುತ್ತಿತ್ತು ಗೌರಿಗೆ. ಅಸಹಾಯಕಳಾಗಿ ಸದಾ ನಿಟ್ಟುಸಿರು ಬಿಡುವುದೊಂದೇ ಅವಳ ಕೆಲಸವಾಗಿತ್ತು. ಮದುವೆಯಾಗಿ ಮೂರು ವರುಷವಾಯಿತಲ್ಲ, ಎಂದಾದರೂ ಗಂಡ ತನಗಾಗಿ ಒಂದು ಸೀರೆ ಅಥವಾ ಒಡವೆ ತರಿಸಿಕೊಟ್ಟಿರುವನೇ? ಊಹುಂ, ಏನಿಲ್ಲ ಅಕ್ಕಪಕ್ಕದವರೊಡನೆ ತನ್ನ ಗಂಡ ಅದು ತಂದಿದ್ದಾನೆ, ಇದು ತಂದಿದ್ದಾನೆ ಎಂದು ಹೇಳಿಕೊಳ್ಳಲು ತನ್ನ ಬಳಿ ಇರುವುದಾದರೂ ಏನು? ತನ್ನ ದುರಾದೃಷ್ಟವೇ ಹೀಗಾಯಿತೆಂದರೆ ತನ್ನ ಗೆಳತಿ ಕಲ್ಯಾಣಿಗೂ ಹಾಗೇ ಆಗಬೇಕೆ? ಒಮ್ಮೆ ಅವಳ ಮನೆಗೆ ಹೋಗಿ ಬರಬೇಕೆಂದೆನಿಸಿತು ಗೌರಿಗೆ. ತಕ್ಷಣವೇ ಹೊರಟೂಬಿಟ್ಟಳು ಕೂಡಾ.

★ ★

"ಬಾ ಗೌರಿ, ಏನು ಈ ಕಡೆ ಬರುವುದೇ ಅಪರೂಪವಾಗಿದೆಯಲ್ಲಾ" ನಗುಮುಖದಿಂದ ಸ್ವಾಗತಿಸಿದಳು ಕಲ್ಯಾಣಿ. ಹೇಗೆ ತಾನೇ ಸದಾ ನಗುನಗುತ್ತಿರುತ್ತಾಳೋ ಈ ಕಲ್ಯಾಣಿ! ಮೊರೆಯಿಟ್ಟಿತು ಗೌರಿಯ ಹೃದಯ. ಸ್ವಲ್ಪ ಹೊತ್ತಿನ ಮಾತುಕತೆಯಾದ ಮೇಲೆ ಗೌರಿ, "ಕಲ್ಯಾಣಿ" ನಾಳೆ ನಾನು ಊರಿಗೆ ಹೋಗುತ್ತೇನೆ ಕಣೆ. ನಿಮ್ಮ ತಾಯಿ ತಂದೆಗೆ ಏನಾದರೂ ಹೇಳ ಬೇಕಾ? ಅವರಿಗೆ ಏನಾದರೂ ಕಳಿಸುವುದಿದ್ದರೆ ಕೊಡು ಅವರಿಗೆ ಕೊಡುತ್ತೇನೆ" ಎಂದಳು.

"ಹೌದೇನೇ ಕಳ್ಳಿ. ಏನೇ ವಿಷಯ? ಎಷ್ಟನೇ ತಿಂಗಳೇ?" ಛೇಡಿಸುವವನಿಯಲ್ಲಿ ಕೇಳಿದಳು ಕಲ್ಯಾಣಿ.

"ಥೂ, ಹೋಗೇವ್ಮ್ಮ, ಅಂಥಾದ್ದೇನೂ ಇಲ್ಲ. ಈ ಸಂಸಾರದ ಗೋಳು ಸಾಕಾಗಿ ಹೋಯ್ತು ಕಣೇಮ್ಮ ಸ್ವಲ್ಪದಿನ ಹಾಯಾಗಿ ತವರು ಮನೆಗಾದರೂ ಹೋಗಿ ಬರೋಣಾಂತ ಅಷ್ಟೆ.„ ಬೇಗನೆ ಹೊರಟುಬಿಟ್ಟಳು ಗೌರಿ ಕಲ್ಯಾಣಿಯ ಮನೆಯಿಂದ.

ಕಾಗದ ಸಹ ಹಾಕದೆ ಇದ್ದಕ್ಕಿದ್ದಂತೆ ಬಂದ ಮಗಳನ್ನು ಆದರದಿಂದ ಬರಮಾಡಿಕೊಂಡಳು ತಾಯಿ. ಗೌರಿ ತನ್ನ ಕೊರತೆಗಳನ್ನೆಲ್ಲಾ ಒಂದಕ್ಕೆ ಹತ್ತಾಗಿ ವರ್ಣಿಸುತ್ತಾ, ತಾಯಿಗೆ ಹೇಳುತ್ತಾ ಕಣ್ಣೀರಿಟ್ಟಳು. ತಾಯಿಯ ಕರುಳು ಚುರ್ರೆಂದಿತು ತುಂಬಾ ನೊಂದು ಕೊಂಡಳು. ಅತಿ ಯೂದ ಮುದ್ದಿನಿಂದ ಸಾಕಿದ ಮಗಳು ಈಗ ಈರೀತಿ ಕಷ್ಟ ಪಡಬೇಕೇ? ಎಂದುಕೊಂಡು ಅವಳೂ ಕಣ್ಣೀರಿಟ್ಟಳು.

ಊರಿನಿಂದ ಬಂದು ಆಗಲೇ ಹದಿನೈದು ದಿನಗಳ ಮೇಲಾಯಿತು. ಇನ್ನೂ ಕಲ್ಯಾಣಿಯ ತಾಯಿಯನ್ನು ಭೇಟಿಮಾಡಲಾಗಲಿಲ್ಲವೆಂದುಕೊಂಡು ಗೌರಿ ಅಂದು ತಾಯಿಗೆ ಹೇಳಿ, ಕಲ್ಯಾಣಿಯ ತವರು ಮನೆಯತ್ತ ಹೆಜ್ಜೆ ಹಾಕಿದಳು ಅವಳ ತಾಯಿಯ ಬಳಿ ಕಲ್ಯಾಣಿಯ ಕಷ್ಟಗಳೆಲ್ಲವನ್ನೂ ಹೇಳಬೇಕು. ಅವಳನ್ನೂ ಇಲ್ಲಿಗೆ ಕರೆಸುವಂತೆ ಮಾಡಬೇಕು ಗಂಡನ ಮನೆಯಲ್ಲಿ ಯಾವ ಸುಖವಿದೆಯೆಂದು ಅಲ್ಲಿರಬೇಕು? ಕಲ್ಯಾಣಿಯೂ ಇಲ್ಲಿಗೆ ಬಂದರೆ ತರಿವನಲ್ಲಿ ಇಬ್ಬರೂ ಹಾಯಾಗಿ ಇರಬಹುದು, ಎಂದುಕೊಂಡು ಗೌರಿ ಪೂರ್ತಿ ಇದೇ ಯೋಚಿಸುತ್ತಾ ಅವರ ಮನೆ ತಲುಪಿದಳು.

ಸ್ವಲ್ಪ ಹೊತ್ತಿನ ಮಾತುಕತೆಯಾದ ಮೇಲೆ ಕಲ್ಯಾಣೀಯ ವಿಷಯ ಪ್ರಸ್ತಾಪಿಸಬೇಕೆಂದು ಕೊಂಡಿರುವಷ್ಟರಲ್ಲಿಯೇ, ಕಲ್ಯಾಣಿಯ ತಾಯಿ ಒಂದು ಕಾಗದದ ಸಮೇತ ಬಂದರು. "ನೋಡಮ್ಮ ಗೌರಿ, ನಮ್ಮ ಕಲ್ಯಾಣಿ ಕಾಗದ ಬರೆದಿದ್ದಾಳೆ. ದೀಪಾವಳಿಗೆ ಅವಳ ಗಂಡ ಇನ್ನೂರು ರೂಪಾಯಿಯ ಸೀರೆ ತರಿಸಿದ್ದಾರಂತೆ. ಹವಳದ ಎರಡೆಳೆ ಸರ ಮಾಡಿಸಲು ಹಾಕಿದ್ದಾರಂತೆ. ಎಲ್ಲಾ ಅವಳ ಯೋಗ. ಸದ್ಯ, ಮಗು ದೂರದ ಊರಿನಲ್ಲಿದ್ದರೂ ಸುಖವಾಗಿದ್ದಾಳಲ್ಲಾ ಅಷ್ಟೇ ಸಾಕು. ದೇವರು ಅವಳನ್ನು ಸುಖವಾಗಿಟ್ಟಿರಲಿ...............ಇನ್ನೂ ಏನೇನೋ ಕಲ್ಯಾಣಿಯ ತಾಯಿ ಹೇಳುತ್ತಲೇ ಇದ್ದರು. ಗೌರಿ ಬೆಚ್ಚಿ ಬಿದ್ದಳು. ಇದೇನಿದು ಕಲ್ಯಾಣಿಯ ಕಲ್ಯಾಣಿಯ ಗಂಡ ಇನ್ನೂರು ರೂಪಾಯಿಯ ಸೀರೆ ಕೊಡಿಸುವುದೆಂದರೇನು? ಅವರು ಈಗಿರುವ ಸ್ಥಿತಿಯಾದರೂ ಎಂಥದು? ಅಂಥಾದರಲ್ಲಿ ಹವಳದ ಸರ ಮಾಡಿಸಲು ಹಾಕಿದ್ದಾರೆಯೇ? ಏನೂ ಹೇಳಲೂ ತೋಚದೆ ಬೇಗ ಹೊರಟು ಬಿಟ್ಟಳು ಗೌರಿ. ಮನೆ ತಲುಪಿದವಳಿಗೆ ಒಂದು ಪತ್ರ ಕಾದಿತ್ತು. ಅದು ಕಲ್ಯಾಣಿಯ ಕಾಗದ, ಸರಸರನೆ ಬಿಚ್ಚಿ ಓದತೊಡಗಿದಳು. "ಒಲುಮೆಯ ಗೆಳತಿ ಗೌರಿ, ನೀನು ಅಲ್ಲಿ ಸೌಖ್ಯವಾಗಿರುವೆಯೆಂದು ನಂಬುತ್ತೇನೆ. ನನ್ನ ತಾಯಿಯನ್ನು ನೋಡಲು ಹೋಗಿದ್ದಿಯಾ? ನೀನು ಅಂದು ನಮ್ಮ ಮನೆಗೆ ಬಂದಾಗ ನಿನಗೆ ಒಂದು ಮುಖ್ಯ ವಿಷಯವನ್ನು ಹೇಳಬೇಕೆಂದುಕೊಂಡಿದ್ದೆ ಆದರೆ ಅಂದು ನನ್ನ ಪತಿ ರಜೆ ತೆಗೆದುಕೊಂಡ ಮನೆಯಲ್ಲಿದ್ದುದರಿಂದ ಹೇಳಲಾಗಲಿಲ್ಲ. ನೀನು ನನ್ನ ತಾಯಿಯೊಡನೆ ನನ್ನ ವಿಷಯವಾಗಿ ಚಿಂತೆಪಡುವಂತೆ ಏನೂ ಹೇಳಬೇಡ. ನಾನು ಬಹಳ ಸಿರಿವಂತೆ, ಸುಖದ ಸುಪ್ಪತ್ತಿಗೆಯಲ್ಲಿದ್ದೇನೆಂದೇ ನನ್ನ ಕಾಗದಗಳೂ ಅವನ್ನೇ ಹೇಳುತ್ತವೆ. ಆ ತಾಯಿ ಕರುಳು ನಿಜಸ್ಥಿತಿಯನ್ನು ಕಂಡು ಮರುಗುವುದನ್ನು ನಾನು ಸಹಿಸಲಾರೆ. ಅಲ್ಲದೆ ನನ್ನ ಮಟ್ಟಿಗೆ ನನಗೆ ಯಾವ ಕೊರತೆಯೂ ಇಲ್ಲ. ನಾನು ಅತ್ಯಂತ ಸುಖಿ. ಸೌಖ್ಯವಾಗಿಯೇ ಇದ್ದೇನೆ. ಹಣಕ್ಕೇನೆ? ಇಂದು ಬರುತ್ತದೆ. ನಾಳೆ ಖರ್ಚಾಗುತ್ತದೆ. ಇರುವುದನ್ನು ಅಚ್ಚುಕಟ್ಟಾಗಿ ಇಟ್ಟುಕೊಂಡು, ಗಂಡನ ಮನ ನೋಯಿಸಿದರೆ ತೃಪ್ತಿಯಿಂದ ಸಂಸಾರ ಮಾಡಿಕೊಂಡು ಹೋದರೆ ಅದಕ್ಕಿಂತ ಮಿಗಿಲಾದುದುಂಟೇ? ಇರುವುದರಲ್ಲೇ ಸುಖಕಾಣಬೇಕು ಗೌರಿ........ ಮುಂದೆ ಓದಲಾಗದೆ ಕಣ್ಣಿನಲ್ಲಿ ನೀರು ತುಂಬಿ ಮಂಜು ಮಂಜಾಗಿ ಅಕ್ಷರಗಳು ಕಾಣತೊಡಗಿದವು. 'ಅವಳೂ ಹೆಣ್ಣೇ, ತಾನೂ ಹೆಣ್ಣೇ ಛಿ?,

ಅದೇ ತಾನೇ ದೇವಸ್ಥಾನದಿಂದ ಹಿಂತಿರುಗಿದ್ದ ತಾಯಿ ಏನೇ, ನಿನ್ನ ಗಂಡನಿಂದ ಕಾಗದ ಬಂತೇನೆ?" ಎಂದರು.

"ಹೌದಮ್ಮ, ಅವರಿಗೆ ಪ್ರೊಮೋಷನ್ ಸಿಕ್ಕಿ ಹೈದರಾಬಾದ್‌ಗೆ ವರ್ಗವಾಗಿದೆಯಂತೆ. ನಾನು ನಾಳೆಯೇ ಊರಿಗೆ ಹೊರಡಬೇಕಮ್ಮ" ಎನ್ನುತ್ತಾ ಕಣ್ಣೀರನ್ನು ಕಾಣದಂತೆ ಒರೆಸಿಕೊಂಡು ತಾಯಿಯ ಮುಖ ದಿಟ್ಟಿಸಿದಳು. ತನ್ನ ಮನಸ್ಸಿನ ಕೊಳೆಯನ್ನು ತೊಡೆದು ಹಾಕುತ್ತಾ, ತನ್ನ ಸಾಮಾನನ್ನು ಜೋಡಿಸಿಕೊಳ್ಳಲು ಒಳನಡೆದಳು. —



# ಶ್ರೀ ಸಿದ್ಧಲಿಂಗೇಶ್ವರ

## ಸುಪ್ರಭಾತಮ್

—ವಿದ್ವಾನ್ ಬಿ. ವಿ. ವೆಂಕಟರಾಮಭಟ್ಟ.

ಉತ್ತಿಷ್ಠ ಸಿದ್ಧಲಿಂಗೇಶ ಜ್ಞಾನಗಂಗಾಧರ ಪ್ರಭೋ ।
ಉತ್ತಿಷ್ಠ ಜಗದೀಶ ತ್ವಂ ಪೂರ್ವಾ ಸಂಧ್ಯಾ ಪ್ರವರ್ತತೇ ॥

ಲೋಕೇಶ ಸ್ವಜನತಾ ಹೃದಯ ಪ್ರರೂಢಂ
ಅಜ್ಞಾನಮ ಘತಮಸಂ ಶಮಯ ತ್ವಮೇವ ।
ಜ್ಞಾನಪ್ರಭಾಮಯದೃಶಾ ಚ ಮನೋಭವಾರೀನ್
ಸಿದ್ಧಾಚಲೇಶ್ವರ ವಿಭೋ ತವ ಸುಪ್ರಭಾತಮ್ ॥

ಶೈಲೇತ್ರ ತೇ ಬಹುವಿಧಪ್ರಸವಾಭಿ ರಾಮ-
ತುಂಗಾವನೀರುಹಪಿಪಾಸುಶುಕಾಃ ಪಿಕಾಶ್ಚ ।
ನಾನಾಫಲಾಶನತಯಾಮಧುರಂ ನದಂತಿ
ಶ್ರೀ ಸಿದ್ಧಲಿಂಗ ಭವತಾತ್ತವ ಸುಪ್ರಭಾತಮ್ ॥

ಸಿದ್ಧಪ್ರದಂ ಸುಕೃತಿನಾಂ ಭವತೀದಮೇವ
ಕ್ಷೇತ್ರಂ ಜನಾಸ್ತು ಸುಖಿನಸ್ತವ ದರ್ಶನೇನ ।
ಧನ್ಯಾಸ್ತಥಾ ಶಿವಕುಮಾರ ವಿಲೋಕನೇನ
ಸಿದ್ಧಾದ್ರಿ ಶೇಖರವಿಭೋ ತವ ಸುಪ್ರಭಾತಮ್ ॥

ಪದೇಸ್ಥಿತಂ ಗುರುಕುಲಂ ಭುವಿ ಸುಪ್ರಸಿದ್ಧಂ
ದಾನದ್ವಯಾತ್ ಕುಲಪತಿರ್ ಪ್ರಥಿತಃ ಶಿವೋ ಹಿ ।
ಜ್ಞಾನೋಜ್ವಲಃ ಶಿವಕುಮಾರತಯಾ ಪ್ರಸಿದ್ಧಃ
ಗಂಗಾಪ್ರಿಯಾಸ್ತು ತವ ಶಂಕರ ಸುಪ್ರಭಾತಮ್ ॥

ಗಂಗಾಧರೋಪಿ ಸಲಿಲಾಪ್ಲವ ತೃಪ್ತಚೇತಾಃ
ಗಂಗಾದಿ ದಿವ್ಯಪಯಸೇ ಸ್ಪೃಹಯಾಲುಚೇತಾಃ ।
ಗಂಗಾಪ್ರಿಯಸ್ತ್ವಮಪಿ ಪೂರಯ ಭಕ್ತಕಾಮಾನ್
ಸಿದ್ಧಾದ್ರಿಶೇಖರಪತೇ ತವ ಸುಪ್ರಭಾತಮ್॥

ಕಾಂತಾನನೇಂದು ರುಚಿಫುಲ್ಲನಿಜಾಸ್ಯಪದ್ಮ
ನೈಜಾನನೇಂದು ದಲಿತಾದ್ರಿಸುತಾಸ್ಯ ಪದ್ಮ
ಅನ್ಯೋನ್ಯಯೋಗ ಪರಿಪಾಲಿತ ಭೂತಜಾತ
ಸಿದ್ಧಾದ್ರಿನಾಥ ಭವತಾತ್ತವ ಸುಪ್ರಭಾತಮ್ ॥

ಉದಯಗಿರಿರುವಾಹ ಜ್ಯೋತಿಷಾಂ ಚಾರುಬಿಂಬಂ
ಜಗತಿ ಕಮಲಿನೀನಾಮೇಕಮಾತ್ರಾವಲಂಬಂ ।
ನಮದಮರಕದಂಬಂ ಸಜ್ಜನಾದರ್ಶಬಿಂಬಂ
ಶಿವ ತವ ಸುವಿಭಾತಂ ದೇಹಿನಶ್ಚಾವಲಂಬಂ ॥

ಭವಾಂಬೋಧಿನಾವಂ ಸದಾಶುದ್ಧ ಭಾವಂ
ಶಿವಂ ಶಾಂತಮೇಕಂ ಪರಿತ್ರಾತಲೋಕಂ ।
ಶಿವಾನಂದಲಿಂಗಂ ಶಿವಾದ್ವೈತಲಿಂಗಂ
ಪರಬ್ರಹ್ಮಲಿಂಗಂ ಭಜೇ ಸಿದ್ಧಲಿಂಗಮ್ ॥

ಪ್ರಸನ್ನಾನ್ನಪೂರ್ಣಾ ಪರಿತ್ರಾಯಮಾಣ
ಪ್ರಸನ್ನ ಪ್ರಪಂಚಂ ಸುರಮ್ಯ ಪ್ರಪಂಚಂ ।
ಲಸದ್ವಿಷ್ಣುಬಾಣಂ ಕೃಪಾಪೂರ್ಯಮಾಣಂ
ಪ್ರಭಾತೇ ಪ್ರಭಾತೇ ಭಜೇ ಸಿದ್ಧಲಿಂಗಮ್ ॥

ಇತಿ ಪಠತಿ ವಿಭಾತೇ ಭಾರ್ಗವಃ ಸುಪ್ರಭಾತಂ
ಶಿವಮಮಲ ತರಂಗೇ ಸಿದ್ಧಗಂಗೇ ತವೇದಮ್ ।
ಶಿವತವ ಚ ವಿಧತ್ತಾಂ ಸಿದ್ಧಲಿಂಗೇಶ ನಿತ್ಯಂ
ಪಠತಿ ಚ ಯ ಇದಂ ಸನ್ಮಂಗಲಂ ತಸ್ಯ ನಿತ್ಯಮ್.

# ನಾವು ಮತ್ತು ನಮ್ಮ ಸ್ವಾತಂತ್ರ್ಯ

'ನಾಡಿಗಾಗಿ ನಾವು' ಎಂಬ ಪ್ರಜ್ಞೆ ಮೂಡದ ಹೊರತು ಬಾಪೂಜಿಯವರು ಕಾಣಲು ಆಶಿಸಿದ್ದ ರಾಮರಾಜ್ಯ ಕನಸಿನ ರಾಜ್ಯವಾಗಿಯೇ ಉಳಿದೀತು. ಎಲ್ಲರಲ್ಲಿಯೂ ಕರ್ತವ್ಯ ನಿಷ್ಠೆ, ಪ್ರಾಮಾಣಿಕತೆ ಮೈಗೂಡಬೇಕು. ಇದೇ ಇಂದು ನಾವು ದೇಶಕ್ಕೆ ಸಲ್ಲಿಸಬೇಕಾಗಿರುವ ಅತ್ಯಮೂಲ್ಯ ಕಾಣಿಕೆ.

—ದೊಡ್ಡಬಾಣಗೆರೆ ಪ್ರಕಾಶಮೂರ್ತಿ

ಸ್ವಾತಂತ್ರ್ಯ ಮಾನವನ ಆಜನ್ಮ ಸಿದ್ಧ ಹಕ್ಕು. ಇದಿಲ್ಲದವನ ಬಾಳು ನಿರಾಶಾದಾಯಕ. ಪರತಂತ್ರದ ದವಡೆಯಲ್ಲಿ ಸಿಕ್ಕಿ ಬಾಳಿ ಬದುಕಿ ಬೆಳಗಬಹುದೆಂಬುದು ತಿರುಕನ ಕನಸಿನ ಕತೆಯಾಗುತ್ತದೆ. ಇಂತಹ ಸ್ವಾತಂತ್ರ್ಯವಿಲ್ಲದೆ ಪರಾವಲಂಬಿಗಳಾಗಿದ್ದ ನಾವು ಸ್ವಾತಂತ್ರ್ಯದ ಹೊಸಿಲು ದಾಟ ಇಂದಿಗೆ ೨೯ ವರ್ಷಗಳು ತುಂಬಿದವು.

## ನಮ್ಮ ಸ್ವಾತಂತ್ರ್ಯದ ಸಾಮರ್ಥ್ಯ :

ನಮಗೆ ಸ್ವಾತಂತ್ರ್ಯ ದೊರಕಿದುದು "ಜೋಡಿ ಒಂಟೆಗಳೆರಡು ಸೂಜಿಯೊಂದರ ರಂಧ್ರದಲ್ಲಿ ತೂರಿ ಬಂದಷ್ಟೇ ಸತ್ಯವಾಯಿತು. ಸಮರಸನ್ನಾಹಗಳ ಸುಳಿವಿಲ್ಲದೆ ಅಹಿಂಸೆ, ಸತ್ಯ, ನ್ಯಾಯ, ಧರ್ಮಗಳ ಸುಶೀಲಾಸ್ತ್ರಗಳ ಬಳಕೆಯಿಂದ ಲಭಿಸಿದ ಭಾರತ ಸ್ವಾತಂತ್ರ್ಯದ ಕಥೆ ಸರ್ವದೇಶಗಳವರನ್ನು ಬೆರಗುಗೊಳಿಸುವುದರಲ್ಲಿ ಸಂಶಯ ಇಲ್ಲ.

ಕಲೆ, ಸಾಹಿತ್ಯ ಸಂಸ್ಕೃತಿಗೆ ನೆಲೆಯಾಗಿ, ಶರಣರ, ಕವಿಗಳ- ಕಲಿಗಳ ಸಂಗಮವಾಗಿ ವಿವಿಧರೀತಿಯಲ್ಲಿಯೂ ಖ್ಯಾತಿವೆತ್ತು; ಚೈತನ್ಯ ಮೂರ್ತಿಗಳಂತಹ ರಾಷ್ಟ್ರಶಿಲ್ಪಿಗಳಿಗೆ ಜೀವನೀಡಿ, ಭಕ್ತಿ ಜ್ಯೋತಿಗಳು ಬೆಳಗಲವಕಾಶ ಮಾಡಿ, ವಿಶ್ವಕ್ಕೆ ಕಣ್ಣಾಗಿ ಆದರ್ಶದ ಹಾದಿಯಲ್ಲಿ ನಿಂತಿರುವ ನಮ್ಮ ಭಾರತ ಸ್ವಾತಂತ್ರ್ಯ ತಂದುಕೊಂಡ ಬಗೆಯಲ್ಲಿಯೂ ಒಂದು ರೀತಿಯ ವೈಶಿಷ್ಟ್ಯವನ್ನು ತೋರಿಸಿ ಕೊಟ್ಟಿತು.

## ಬಾಪೂಜಿ ಕನಸು :

ಮೇಕೆ ಹಾಲುಕುಡಿದು ಶೇಂಗಾಬೀಜ ತಿಂದು ಅಹಿಂಸೆ ಸತ್ಯಾಗ್ರಹಗಳ ಗಣಿಯಾದ ಗಾಂಧೀಜಿಯವರು ಮತ್ತವರ ಅನುಯಾಯಿಗಳೇನಕರ ಸರ್ವ ಸಾಹಸಗಳಿಂದ ಸಂದ ಸ್ವಾತಂತ್ರ್ಯದ ಉಳಿವಿನ ಹೊಣೆ ನಮ್ಮೆಲ್ಲರ ಹೆಗಲಮೇಲಿದೆ. ರಾಮರಾಜ್ಯವನ್ನು ಕಟ್ಟಬಯಸಿದ ಗಾಂಧೀಜಿಯವರ ಕನಸನ್ನು ನನಸಾಗಿಸುವ ಕಾರ್ಯ ನಮ್ಮಗಳ ಹೆಗಲ ಮೇಲಿದೆ.

ಅಪಾರ ಶ್ರಮದಿಂದ ಅನೇಕ ಸಮಸ್ಯೆಗಳನ್ನು ಎದುರಿಸಿ ಬಿಳಿಯರನ್ನು ಓಡಿಸಿದ ನಮ್ಮ ಹಿರಿಯರಿಗೆ ನಾಡವರ ಕೊಡುಗೆ ಏನು ? ನಮ್ಮ ಹೆಗಲಮೇಲಿರುವ ಸ್ವಾತಂತ್ರ್ಯವನ್ನು ಉಳಿಸುವ ಹೊಣೆ ಎಷ್ಟು ? ಎಂಬ ಪ್ರಶ್ನೆಗಳಿಗೆ ಉತ್ತರ ಹುಡುಕುವ ಪರಿವೆ ನಾಡಜನಾಂಗದಲ್ಲಿ ಒಡ ಮೂಡಬೇಕಾಗಿದೆ ಸ್ವಾತಂತ್ರ್ಯಾಭಿಮಾನ ಎಂದೂ ಯಾರಲ್ಲೂ ಬತ್ತದ ತೊರೆಯಾಗಿ ಹರಿಯಬೇಕಾಗಿದೆ.

## ನಮ್ಮೆದುರಿರುವ ಸಮಸ್ಯೆಗಳು ಮತ್ತು ನಾವು :

"ನಾವು ಭ್ರಷ್ಟಾಚಾರದ ಬುರುಡೆಗಳಾದರೆ ನಮ್ಮ ಹಿಪ್ಪಪರ ಸಂಸ್ಕೃತಿಯನ್ನು ಮಣ್ಣು ಮಾಡಿ

( 26 ನೇ ಪುಟ ನೋಡಿ )

# ಟೋಕಿಯೊ.

‘ಬಿಂದುವಿನಲ್ಲಿ ಸಿಂದು’ ಎನ್ನುವಂತೆ ಅತ್ಯಂತ ಕಡಿಮೆ ವಿಸ್ತೀರ್ಣವುಳ್ಳ ಜಪಾನ್, ವಿಶ್ವದ ಹೆಸರಾಂತ ಪ್ರಗತಿಪರ ರಾಷ್ಟ್ರಗಳನ್ನು ಬೆರಗುಗೊಳಿಸಿ ಅವನ್ನು ಹಿಂದೆ ಸರಿಸಿ ಮುನ್ನಡೆ ಸಾಧಿಸಿದೆ ಎಂದರೆ ಆಶ್ಚರ್ಯಪಡಬೇಕಾಗಿಲ್ಲ ಕೃಷಿ, ಕೈಗಾರಿಕೆ, ಶಿಲ್ಪಕಲೆ, ಶಿಕ್ಷಣ ಮುಂತಾದ ಎಲ್ಲ ರಂಗಗಳಲ್ಲೂ ಅಲ್ಪಾವಧಿಯಲ್ಲಿ ಅದ್ಭುತ ಪ್ರಗತಿ ಸಾಧಿಸಿರುವ ಜಪಾನ್ ಬೆಳೆದು ನಿಂತ ಕಥೆ ಸುರಮ್ಯವಾದುದು.

—ಕ್ಯಾಪ್ಟನ್ ಎಂ. ಜಿ. ಕೆ. ಮೂರ್ತಿ

ಜಪಾನೀಯರು ತಮ್ಮ ರಾಷ್ಟ್ರವನ್ನು "ಜಪಾನ್" ಎಂದು ಕರೆಯುವುದಿಲ್ಲ "ನಿಪ್ಪನ್" ಅಥವ "ಯಾಮಾಟೋ" ಎನುತ್ತಾರೆ. ಅದರ ಅರ್ಥ "ಪರ್ವತದ ಹೆಬ್ಬಾಗಿಲು" ಚೀನೀಯರು ತಮ್ಮ ಪೂರ್ವದಿಕ್ಕಿನಲ್ಲಿದ್ದ ಈ ದೇಶಕ್ಕೆ "ಸೂರ್ಯೋದಯದ ಪ್ರಾಂತ"ಎಂದು ಚೀನೀಭಾಷೆಯಲ್ಲಿ ಅರ್ಥ ಕೊಡುವ "ಜಿಮ್-ನೆನ್-ಕೊ" ಎಂದು ಹೆಸರಿಟ್ಟರು. ವಿಖ್ಯಾತ ಪ್ರವಾಸಿ ಮಾರ್ಕೊ ಪೋಲೋ ಎಂಬಾತ ಆ ಶಬ್ಧವನ್ನು "ಜಪಾನ್‌ಗೂ" ಎಂದು ಉಚ್ಚರಿಸುತ್ತಾ, ಕೊನೆಗೆ ಅದು "ಜಪಾನ್" ಎಂದಾಯಿತು.

ಜಪಾನ್ ಶಾಂತಸಾಗರದ ನಾನಾ ಗಾತ್ರಗಳ 4000 ದ್ವೀಪಗಳ ಸಮೂಹ. ಅವುಗಳಲ್ಲಿ ನಾಲ್ಕು ದೊಡ್ಡವು, ಮಿಕ್ಕವು ಚಿಕ್ಕವು. ಅತ್ಯಂತ ಮುಖ್ಯವಾದುದಕ್ಕೆ "ಹೋನ್‌ಷು" ಎಂದು ಹೆಸರು. ರಾಷ್ಟ್ರದ ಮುಖ್ಯ ಪಟ್ಟಣಗಳೆಲ್ಲಾ ಇಲ್ಲಿವೆ.

ಜಪಾನಿನ ವಿಸ್ತೀರ್ಣ ಬ್ರಿಟಿಷ್ ದ್ವೀಪಗಳ ಅರ್ಧದಷ್ಟು ಮಾತ್ರ. ಕರ್ನಾಟಕ ರಾಜ್ಯದ ಇಮ್ಮಡಿ ಆದರೂ ಜನಸಂಖ್ಯೆ ಹತ್ತು ಕೋಟಿಯನ್ನು ಮೀರುತ್ತದೆ. ಒಂದು ಲಕ್ಷ ಜನಸಂಖ್ಯೆಗೆ ಮೇಲ್ಪಟ್ಟ ಪಟ್ಟಣಗಳು 60 ಇವೆ. ಹತ್ತು ಲಕ್ಷಕ್ಕೂ ಹೆಚ್ಚು ಜನಸಂಖ್ಯೆಯು ಆರು ಪಟ್ಟಣಗಳಿವೆ. ಅವುಗಳಲ್ಲೆಲ್ಲಾ ಅತ್ಯಂತ ದೊಡ್ಡದು ಟೋಕಿಯೊ. ಇದು ಒಂದು ನದೀ ಮುಖದ ಮೇಲೆ ಒಂದು ಕೊಲ್ಲಿಯ ಸುತ್ತಲೂ 796 ಚದರ ಮೈಲಿ ವಿಸ್ತೀರ್ಣದಲ್ಲಿ ಹರಡಿಕೊಂಡು ಅನೇಕ ಮೈಲಿ ದೂರ ಬೆಟ್ಟ, ಕಣಿವೆಗಳ ಮೇಲೆಲ್ಲಾ ಹಬ್ಬಿಕೊಂಡಿದೆ. ಸುಮಿದಾ ನದಿಯು ಟೋಕಿಯೋವನ್ನು ಎರಡು ಅಸಮ ಭಾಗಗಳಾಗಿ ವಿಭಾಗಿಸಿದೆ.

50 ಕ್ಕಿಂತಲೂ ಹೆಚ್ಚು ಕಾಲುವೆಗಳು ಟೋಕಿಯೋದಲ್ಲಿ ಹರಿಯುತ್ತವೆ. ಅವುಗಳನ್ನು ದಾಟಲು ಸೇತುವೆಗಳಿವೆ. ಅನೇಕ ಕಾಲುವೆಗಳು ಸುರುಳಿಯಂತೆ ಸುತ್ತುಗಟ್ಟಿರುವುದರಿಂದ ಅವುಗಳ ಮಧ್ಯದಲ್ಲಿ ಒಂದರೊಳಗೊಂದರಂತೆ ಅನೇಕ ದ್ವೀಪಗಳಾಗಿವೆ. ಎಲ್ಲಕ್ಕಿಂತಲೂ ಒಳಗಿರುವ ದ್ವೀಪದಲ್ಲಿ ಚಕ್ರವರ್ತಿಯ ಭವ್ಯ ಅರಮನೆ ಇದೆ. ಈ ಕಟ್ಟಡ ಸಮುದಾಯಗಳ ಸುತ್ತಲೂ ಬಹು ರಮ್ಯ ಉದ್ಯಾನಗಳೂ, ಸರೋವರಗಳು ಶೋಭಿಸುತ್ತವೆ. ಸರೋವರಗಳಲ್ಲಿ ಈಜಾಡುವ ಹಂಸಗಳು ಬಹು ಸುಂದರ.

ಈ ವಲಯದ ಸುತ್ತಲೂ ಎರಡು ಬೇರೆ ಬೇರೆ ಉನ್ನತ ಗೋಡೆಗಳಿವೆ. ಅವುಗಳನ್ನು ಅನೇಕ ರಮ್ಯ ಕಂದಕಗಳು ಆವರಿಸಿವೆ. ಟೊಕಿಯೋ ಈ ಪುರಾತನ ದುರ್ಗದ ಸುತ್ತಲೂ ನಕ್ಷತ್ರದ ಆಕಾರದಲ್ಲಿ ಪ್ಯಾರಿಸ್, ಮಾಸ್ಕೋ, ಮಿಲಾನ್ ಪಟ್ಟಣಗಳಂತೆ ಜೇಡರಹುಳದ ಬಲೆಯ ನಮೂನೆಯಲ್ಲಿ ನಿರ್ಮಾಣವಾಗಿವೆ. ರಸ್ತೆಗಳು ಅರಮನೆಯ ಆವರಣ ಪ್ರಕಾರದಿಂದ ಹೊರಟು ಚಕ್ರದ ಕಡ್ಡಿಗಳಂತೆ ನಾನಾ ದಿಕ್ಕುಗಳಲ್ಲಿ ಅನೇಕ ಮೈಲು ದೂರ ಪಟ್ಟಣದ ನಾನಾ ಭಾಗಗಳಿಗೆ ಚಾಚಿಕೊಂಡಿವೆ.

ಜಪಾನೀಯರಿಗೆ ಪರಮ ಪವಿತ್ರ ಕ್ಷೇತ್ರವಾದ

ಫ್ಯೂಜಿಯಾಮಾ ಜ್ವಾಲಾಮುಖಿಯು ಇಲ್ಲಿಂದ ಬಹು ಚೆನ್ನಾಗಿ ಕಾಣುತ್ತದೆ. ರಮ್ಯ ಜಲಪಾತಗಳಿಂದ ಕೈಗಾರಿಕೆಗಳಿಗೂ, ಗೃಹೋದ್ಯಮಗಳಿಗೂ ವಿದ್ಯುಚ್ಛಕ್ತಿಯು ಒದಗುವ ವ್ಯವಸ್ಥೆಯಾಗಿದೆ.

ಟೋಕಿಯೋ ಪ್ರಾಚೀನ ಪಟ್ಟಣವಲ್ಲ. ಅದು ಮೊದಲು ಸುಮಿದಾ ನದಿಯ ಜೌಗು ಆಳಿವೆಯಲ್ಲಿ "ಯೆದೋ" ಎಂಬ ಹೆಸರಿನಲ್ಲಿ ಬೆಸ್ತರ ಕುಗ್ರಾಮವಾಗಿತ್ತು. ಪಾಳೆಯಗಾರರು ಇಲ್ಲಿ ಒಂದು ದುರ್ಗವನ್ನು ಕಟ್ಟಿ 19ನೇ ಶತಮಾನದವರೆಗೂ ಪ್ರಬಲರಾಗಿದ್ದರು ಜಪಾನಿನ ಚಕ್ರವರ್ತಿಗಳು ನಿರ್ಬಲರಾಗಿ ಕಿಯೋಟೋ ಎಂಬ ಊರನ್ನು ರಾಜಧಾನಿಯನ್ನಾಗಿ ಮಾಡಿಕೊಂಡಿದ್ದರು. 1868 ರಲ್ಲಿ ಮುಷುಹಿಕೋ ಎಂಬ ರಾಜನು ಪಾಳೆಯಗಾರರನ್ನು ಓಡಿಸಿ "ಯೆದೋ"ಗೆ ತನ್ನ ರಾಜಧಾನಿಯನ್ನು ಬದಲಾಯಿಸಿದ. "ಯೆದೋ" ಎಂಬ ಹೆಸರನ್ನು ತೆಗೆದು ಹಾಕಿ "ಟೋಕಿಯೋ" ಎಂದು ಹೆಸರಿಟ್ಟ. "ಟೋ–ಕಿಯೊ" ಎಂಬ ಶಬ್ಧಗಳ ಅರ್ಥ "ಪೂರ್ವ ದಿಕ್ಕಿನ ರಾಜಧಾನಿ." ಅವನು ಹಿಂದೆ ಇದ್ದ ಕಿಯೋಟೋ ಎಂಬ ಊರಿನ ಅರ್ಥ "ಪಶ್ಚಿಮದ ರಾಜಧಾನಿ." ಆದ್ದರಿಂದ "ಯೆದೋ"ಗೆ ಟೋಕಿಯೋ ಎಂಬ ಹೆಸರು ಬಂದಿತು

ಯೆದೋ ದುರ್ಗದಲ್ಲೇ ರಾಜನ ಅರಮನೆ ಸ್ಥಾಪಿತವಾಯಿತು ಊರು ಕ್ರಮೇಣ ಬೆಳೆಯಿತು. ಇಕ್ಕಟ್ಟಾದ ಬೀದಿಗಳೂ, ಮರ, ಕಾಗದ ಬೊಂಬುಗಳ ಮನೆಗಳೂ, ಮರದ ಶಿಥಿಲವಾದ ಬಡಕಲ ಸೇತುವೆಗಳೂ ರಚಿತವಾದವು. ಪದೇ ಪದೇ ಸಂಭವಿಸುತ್ತಿದ್ದ ಉಗ್ರ ಬೆಂಕಿಯ ಅಪಘಾತಗಳು ಊರನ್ನು ಸುಟ್ಟು ಬೂದಿ ಮಾಡುತ್ತಿದ್ದವು. ಜನಾಂಗದ ಸಾಹಸದಿಂದ ನೂತನ ಸೃಷ್ಟಿಗಳಾಗಿ ಪಟ್ಟಣವು ಪುನರ್ನಿರ್ಮಾಣವಾಗುತ್ತಿತ್ತು. ಸರಾಸರಿ ಹತ್ತು ವರ್ಷಗಳಿಗೊಮ್ಮೆ ಹೊಸ ಪಟ್ಟಣವು ಉದ್ಭವಿಸುತ್ತಿತು. ಪದೇ ಪದೇ ಆಗುತ್ತಿದ್ದ ಭೂಕಂಪಗಳೂ ಹಾವಳಿ ಮಾಡುತ್ತಿದ್ದವು.

1923 ರಲ್ಲಿ ಬಂದ ಭೂಕಂಪದಲ್ಲಿ ಟೋಕಿಯೊ ಒಂದರಲ್ಲೇ 1½ ಲಕ್ಷ ಜನರು ಮಡಿದರು. ಸುಂಟರಗಾಳಿಯಿಂದ ಹರಡಿಕೊಂಡ ದಳ್ಳುರಿಯೂ, ನೂರಾರಡಿಗಳೆತ್ತರ ಎದ್ದ ಅಲೆಗಳೂ ಊರನ್ನು ಧ್ವಂಸ ಮಾಡಿದವು. ಮತ್ತೆ ಏಳು ವರ್ಷಗಳಲ್ಲಿ ಹೊಸ ಪಟ್ಟಣ ನಿರ್ಮಾಣವಾಯಿತು. ದ್ವಿತೀಯ ಮಹಾಯುದ್ಧದಲ್ಲಿ ಶತ್ರು ಬಾಂಬುಗಳು 10 ಲಕ್ಷಕ್ಕಿಂತಲೂ ಹೆಚ್ಚು ಕಟ್ಟಡಗಳನ್ನು ನಾಶಮಾಡಿದವು. ಶೇಖಡ 80 ರಷ್ಟು ಊರು ಭಸ್ಮವಾಯಿತು. ಆದರೂ ಜನಾಂಗವು ಅನುಪಮ ಧೈರ್ಯ, ಸ್ಥೈರ್ಯ, ಸಾಹಸದಿಂದ ಬಹು ಸುಂದರ ಅತ್ಯಾಧುನಿಕ ಹೊಸ ಟೋಕಿಯೊವನ್ನು ಸೃಷ್ಟಿಸಿತು. ಅಗಲದ ರಸ್ತೆಗಳೂ, ಸಾಲು ಮರಗಳ ಪ್ರಶಸ್ತ ವಿಶಾಲ ಮಾರ್ಗಗಳೂ, ಉಕ್ಕು, ಕಾಂಕ್ರೇಟ್ ಕಲ್ಲುಗಳ, ಭೂಕಂಪಗಳನ್ನು ಪ್ರತಿರೋಧಿಸುವ ಕಟ್ಟಡಗಳೂ ರಚಿತವಾದವು. ಬೆಂಕಿಯಲ್ಲಿ ಸುಟ್ಟು ಬೂದಿಯಾದ ಫೀನಿಕ್ಸ್ ಎಂಬ ಪಕ್ಷಿಯು ತನ್ನ ಬೂದಿಯಿಂದ ತಿರುಗಿ ಹುಟ್ಟುವಂತೆ ಹೊಸ ಟೋಕಿಯೋ ಮಹಾ ವೈಭವ ಪ್ರತಾಪದಿಂದ ಎದ್ದು ನಿಂತಿತು. ಕೆನ್‌ಜೊ ಟಾಂಗೆ, ಕೋರ್ ಜೋನಿಯರ್ ಮುಂತಾದ ಅಂತರ ರಾಷ್ಟ್ರೀಯ ಪ್ರಖ್ಯಾತಿಯ ಪ್ರವೀಣ ಶಿಲ್ಪಿಗಳು ಬಹು ಸುಂದರ ಕಟ್ಟಡಗಳನ್ನು ರೂಪಿಸಿದರು. ಅರಮನೆಗಳಂಥ ಮಹಲುಗಳು ಕಾರ್ಖಾನೆಗಳು ಬೆಳೆದವು. ಸಂಜೆಯಲ್ಲಿ ಮಿನುಗುವ ವಿವಿಧ ಬಣ್ಣಗಳ ದೀಪಗಳೂ, ದೀಪ ಸಂಕೇತಗಳು ಇಲ್ಲಿರುವಷ್ಟು ಜಗತ್ತಿನಲ್ಲಿ ಇನ್ನೆಲ್ಲೂ ಇಲ್ಲ ವಾಹನಗಳು ಓಡಲು ಭೂಗರ್ಭ ಸುರಂಗಗಳು, ವಿದ್ಯುತ್ ಕಾರುಗಳು, ವಿದ್ಯುತ್ ಮತ್ತು ಡೀಸಲ್ ರೈಲುಗಳು ಬಂದವು. ವಾಹನಗಳು ವೈಲಿಗಟ್ಟಲೆ ಇರುವೆ ಸಾಲಿನಂತೆ ಸಾಲಾಗಿ ನಿಂತಿರುತ್ತವೆ ಅಡ್ಡ ಬೀದಿಗಳಿಂದ ವಾಹನಗಳ ಓಡಾಟಕ್ಕೆ ತಡೆಯಾಗದಂತೆ ಅಡ್ಡ ಬೀದಿ ಬರುವಲ್ಲಿ "ಹೈ ವೇ" ಗಳ ಮೇಲೆ ಹೋಗುವಂತೆ ಏರ್ಪಾಟಿದೆ. ಪೃಥ್ವಿಯ ಬೇರೆ ಯಾವ ಊರಿನಲ್ಲೂ ಇಷ್ಟು ಟ್ಯಾಕ್ಸಿಗಳಿಲ್ಲ. ಟ್ಯಾಕ್ಸಿ ಬಹು ವೇಗವಾಗಿ ಓಡುತ್ತದೆ ಬಸ್ಸು, ಕಾರುಗಳ ಸಂಧಿಯಿಂದ ಹಾಯ್ದು ಎಲ್ಲವನ್ನೂ ಹಿಂದೆ ಹಾಕುತ್ತದೆ.

ಜಗತ್ತಿನ ಪಟ್ಟಣಗಳಲ್ಲೆಲ್ಲಾ ಟೋಕಿಯೋ ಅತ್ಯಂತ ದೊಡ್ಡದು. ಜನಸಂಖ್ಯೆ ಮೀರಿಸಿದೆ. ಈ ಇಡೀ ಜಪಾನ್ ಜನಸಂಖ್ಯೆಯ $\frac{1}{10}$ ಭಾಗ. ಈ ಸಂಖ್ಯೆ 1½ ಕೋಟಿಗೇರುವ ನಿರೀಕ್ಷಣೆ ಇದೆ. ಟೋಕಿಯೋದ ಮಧ್ಯ ಕೇಂದ್ರದಿಂದ 37 ಮೈಲಿ ತ್ರಿಜ್ಯದೊಳಗೆ 2½ ಕೋಟಿಗಿಂತಲೂ ಹೆಚ್ಚು ಜನರಿದ್ದಾರೆ. ಟೋಕಿಯೋ ಪೃಥ್ವಿಯ ಅತ್ಯಂತ ಜನಸಾಂದ್ರಗಳಲ್ಲೊಂದು. ಸಮುದ್ರ

ವನ್ನು ದೂರ ಒತ್ತರಿಸಿ ಹೆಚ್ಚು ಭೂಮಿಯನ್ನು ಪಡೆದಿದ್ದರೂ ಸ್ಥಳದ ಅಭಾವ ಬಹಳ. ಎತ್ತರಗಳ ಕಟ್ಟಡಗಳೇ ಈ ಸಮಸ್ಯೆಗೆ ಪರಿಹಾರ. ಟೋಕಿಯೋದಲ್ಲಿ ಪ್ರತಿ ತಿಂಗಳೂ 10,000 ಹೊಸ ಕಾರುಗಳು ಬರುತ್ತವೆ.

ಜಪಾನಿಯರ ಸಾಹಸದಿಂದ ಅನೇಕ ಪವಾಡಗಳಾಗಿವೆ. ಟೋಕಿಯೋದ ಟ್ರಾನ್‌ಸಿಸ್ಟರ್ ರೇಡಿಯೋಗಳೂ, ಕ್ಯಾಮರಾಗಳೂ ಇಡೀ ಪ್ರಪಂಚದಲ್ಲಿ ಸರ್ವೋತ್ತಮವಾದವು. ಚಲನ ಚಿತ್ರಗಳ ಕೈಗಾರಿಕೆ, ಸ್ಟುಡಿಯೋಗಳಲ್ಲಿ ಈ ರಾಷ್ಟ್ರ ಪೃಥ್ವಿಯಲ್ಲೆಲ್ಲಾ ಅತ್ಯಂತ ದೊಡ್ಡದು, ಪುಸ್ತಕ, ಪತ್ರಿಕೆಗಳ ಪ್ರಕಟನೆಗಳಲ್ಲಿ ಪೃಥ್ವಿಯಲ್ಲಿ ಇದಕ್ಕೆ ಎರಡನೆಯ ಸ್ಥಾನ, ಅಸಾಹಿ, ಮೈನಚಿ ಯೋಮಿಯೂರಿ ಎಂಬಿವು ಬಹು ಪ್ರಖ್ಯಾತ ಪತ್ರಿಕೆಗಳು ಯೂರೋಪಿನಲ್ಲೆಲ್ಲಾ ಅತ್ಯುನ್ನತವಾದ 984 ಅಡಿಗಳೆತ್ತರದ ಪ್ಯಾರಿಸ್‌ನ ಎಫೆಲ್ ಗೋಪುರದ ಎತ್ತರವನ್ನು ಮೀರಿಸಲು ಅದಕ್ಕಿಂತಲೂ 98 ಅಡಿ ಹೆಚ್ಚು ಎತ್ತರದ " ಟೋಕಿಯೋಟವರ್ " ನಿರ್ಮಿತವಾಗಿದೆ. ಅದರ ಕೆಳಗೆ ಟೆಲಿವಿಜನ್ ಸ್ಟುಡಿಯೋ ಇರುವ ಐದು ಅಂತಸ್ತಿನ ಕಟ್ಟಡವಿದೆ. ಭಾರಿ ಟೆಲಿವಿಜನ್ ಕೈಗಾರಿಕೆ ಬೆಳೆಯುತ್ತಿದೆ. ಹತ್ತು ಲಕ್ಷ ಟೆಲಿವಿಜನ್ ಸೆಟ್‌ಗಳಿವೆ, 60 ಟೆಲಿವಿಜನ್ ಕ್ಷೇತ್ರಗಳಿವೆ, 1082 ಅಡಿಗಳೆತ್ತರದ "ಟೋಕಿಯೋ ಟವರ್ " ಟೆಲಿವಿಜನ್ ಗೋಪುರವಾಗಿದೆ. 18 ನೇ ಒಲಿಂಪಿಕ್ ಆಟಗಳಪಂದ್ಯಗಳು ಟೋಕಿಯೋದಲ್ಲಿ ಜರುಗಿದಾಗ ನಿರ್ಮಿಸಿದ "ಒಲಿಂಪಿಕ್ ಪಟ್ಟಣ " ದ ವೈಭವ ಅಗ್ರಗಣ್ಯ. ಬಹು ಸ್ವಲ್ಪ ಕಾಲದಲ್ಲಿ 70,000 ಮಂದಿ ಪ್ರೇಕ್ಷಕರನ್ನು ಹಿಡಿಯುವಷ್ಟು ದೊಡ್ಡದಾದ ಅತ್ಯಾಧುನಿಕ ಸ್ಟೇಡಿಯಂ ಸ್ಥಾಪಿತವಾಯಿತು. " ವಕಾಡೊ " ತೂಗುಸೇತುವೆಯು ಕಮಾನಿನ ಅಗಲದಲ್ಲೂ ಸೌಂದರ್ಯದಲ್ಲೂ ಅಮೆರಿಕದ ಸ್ಯಾನ್ ಫ್ರಾನ್ಸಿಸ್ಕೋ ಪಟ್ಟಣದ ಜಗದ್ವಿಖ್ಯಾತ " ಗೋಲ್ಡನ್ ಗೇಟ್ ಸೇತುವೆ " ಗೆ ಮಿಗಿಲಾಗಿದೆ.

ಟೋಕಿಯೋದಿಂದ ಒಸಾಕಾ ನಗರಕ್ಕೆ ಹೋಗುವ " ಹಿಕಾರಿ ಸೂಪರ್-ಎಕ್ಸ್‌ಪ್ರೆಸ್ " ಎಂಬ ರೈಲು ವಿಶ್ವದ ರೈಲುಗಳಲ್ಲೆಲ್ಲಾ ಅತ್ಯಂತ ವೇಗವಾಗಿ ಓಡುತ್ತದೆ. ಗಂಟೆಗೆ 150 ಮೈಲಿಗಿಂತಲೂ ಶೀಘ್ರ. ಈ ರೈಲಿನ ಕಂಬಿಗೆ ಉಕ್ಕನ್ನು ಕೊಟ್ಟ ಸುಮಿಟೋಹೋ ಕಂಪನಿಯ ಜಾಹಿರಾತು ಏನೆಂದರೆ, "ಗಂಟೆಗೆ 60 ಮೈಲು ವೇಗದ ರೈಲಿನಲ್ಲಿ ಕುಡಿಯುವ ಕಾಫಿ ಚೆಲ್ಲುತ್ತದೆ. 150 ಮೈಲಿ ವೇಗದ ಟೋಕಿಯೋ ರೈಲಿನಲ್ಲಿ ಒಂದು ಹನಿ ಕೂಡ ಚೆಲ್ಲುವುದಿಲ್ಲ" ಈ ರೈಲಿನಲ್ಲಿ 300 ಮೀಟರ್ ಉದ್ದವಾಗಿರುವ 12 ಕೋಚ್‌ಗಳಿವೆ. 16 ಕೋಚ್‌ಗಳನ್ನು ಸೇರಿಸಿ ರೈಲಿನ ಉದ್ದವನ್ನು 400 ಮೀಟರ್ ಮಾಡಲು ಏರ್ಪಾಟಾಗಿದೆ. ಇಷ್ಟು ಉದ್ದದ ಪ್ರಯಾಣಿಕರ ರೈಲು ಪೃಥ್ವಿಯಲ್ಲಿ ಇನ್ನೆಲ್ಲೂ ಇಲ್ಲ. ಈ ರೈಲಿನಲ್ಲಿ ಪ್ರಯಾಣಿಕರ ಸಂಖ್ಯೆ 987 ರಿಂದ 1402ಕ್ಕೆ ಏರುತ್ತದೆ. ದಿಂಬು ಹಾಕಿ ಮೆತ್ತಗೆ ಮಾಡಿ ಹಿಂದಕ್ಕೂ ಮುಂದಕ್ಕೂ ಸರಿಯುವ ಆಸನಗಳು. ಆಕಾಶ ವಿಮಾನದ ಪೀಠಗಳಿಗಿಂತಲೂ ಹೆಚ್ಚು ಸೌಕರ್ಯವಾಗಿವೆ. ಟೋಕಿಯೋ ರೈಲುಗಳಿಂದ ಜಪಾನಿನ ಯಾವ ಭಾಗಕ್ಕಾದರೂ ಟೆಲಿಫೋನ್ ಮಾಡಲು ಸಾಧ್ಯ. ಜಪಾನಿನಲ್ಲಿ ಪ್ರತಿನಿಮಿಷದ ಸಣ್ಣ ಅಂಶಕ್ಕೂ ಬೆಲೆ ಕೊಡುವ ಪ್ರವೃತ್ತಿ ರೂಢಿಯಲ್ಲಿದೆ. ರೈಲು ನಡೆಸುವವರಿಗೆ ಪ್ರತಿ 15 ಸೆಕೆಂಡುಗಳಲ್ಲೂ ಹೊರಡುವ ಪ್ರಯಾಣಿಕ ರೈಲುಗಳ ಕಾಲಕ್ರಮಣ ಪಟ್ಟಿಯನ್ನು ಕೊಟ್ಟಿದೆ. ಟೋಕಿಯೋದ ಉಪನಗರಗಳಲ್ಲಿ ವಿದ್ಯುತ್ ರೈಲುಗಳಿರುವುದರಿಂದ ಅವು ಪ್ರತಿ ಹತ್ತು ಸೆಕೆಂಡುಗಳಲ್ಲೂ ಹೊರಡುತ್ತವೆ. ರೈಲಿನ ಸಿಬ್ಬಂದಿಯವರ ಮತ್ತು ರೈಲು ಪ್ರಯಾಣಿಕರ ಮನಸ್ಸಿಗೆ ಕಾಲದ ಸಂವೇದನೆಯನ್ನು ತೀವ್ರವಾಗಿ ನಾಟಿಸಲು ರೈಲುಗಳು ಕಾಲಾವಧಿಯಲ್ಲಿ ಸ್ವಲ್ಪವೂ ಹೆಚ್ಚು ಕಡಿಮೆ ಇಲ್ಲದಂತೆ ಓಡಾಡುತ್ತವೆ.

ಯುದ್ಧದಿಂದ ಹಾವಳಿ, ವಿಧ್ವಂಸಗಳಾಗಿಯೂ ಕೂಡ ಜಪಾನು ಬಹು ಬೇಗ ಚೇತರಿಸಿ. ವಿಜ್ಞಾನ, ಕೈಗಾರಿಕೆಗಳಲ್ಲೂ, ಆಧುನಿಕ ಯಾಂತ್ರಿಕ ಮುನ್ನಡೆಯಲ್ಲೂ ಮಾಡಿರುವ ಬೃಹತ್ ಪ್ರಗತಿಯು ಅಮೇರಿಕ, ಜರ್ಮನಿಯಂಥ ಮುಂದಾದ ದೇಶಗಳನ್ನೂ ಬೆರಗು ಮಾಡಿದೆ.. ಅದು ಪಾಶ್ಚಾಮಾತ್ಯರನ್ನು ಅವರದೇ ಆಟದಲ್ಲಿ ಸೋಲಿಸಿದೆ. ಹಳೆಯ ವಿಧಾನವನ್ನು ತ್ಯಜಿಸಿ ಹೊಸ ಸಂಶೋಧನೆಯ ಮಾರ್ಗವನ್ನು ಹಿಡಿದು ತಕ್ಕ ಸಲಕರಣೆಗಳನ್ನು ಅನುಸರಿಸವುದೇ ಈ ಜನರ ಪ್ರಗತಿಯ ರಹಸ್ಯ, ಜಪಾನಿನ ಕಾರುಗಳು ಶೋಭೆ, ಓಡಾಟ, ಮಿತವ್ಯಯಗಳಿಗೆ ಹೆಸರಾಗಿವೆ, ಅದರ ರೇಷ್ಮೆ, ನೇಯ್ದ ವಸ್ತ್ರ

ಕಲೆ ಇತರ ದೇಶಗಳಿಗೆ ಮಾದರಿಯಾಗಿವೆ, ಅದರ ಬಸ್‌ಗಳೂ, ಪ್ರಯಾಣಿಕರ ವಾಹನಗಳೂ ಜಗತ್ತಿನಲ್ಲೆಲ್ಲಾ ಯಶಸ್ವಿಯಾಗಿವೆ, ಉಕ್ಕಿನ ಉತ್ಪಾದನೆಯಲ್ಲಿ ಅಮೇರಿಕ, ರಷ್ಯಾ ಬಿಟ್ಟರೆ ಇವಕ್ಕೆ ಅಗ್ರಸ್ಥಾನ, ಮೋಟಾರ್ ವಾಹನಗಳ ಕೈಗಾರಿಕೆಯಲ್ಲಿ ಜಗತ್ತಿನ ಎರಡನೆಯ ಸ್ಥಾನ. ಟೋಕಿಯೋ–ಯೋಕೊಹಾಮಾದ 17 ಮೈಲಿ ಉದ್ದದ ಬಂದರಿನಲ್ಲಿ 1½ ಲಕ್ಷ ಟನ್ ಭಾರದ "ಟೋಕಿಯೋ ಮಾರು" ಎಂಬ ವಿಶ್ವದಲ್ಲೇ ಅತ್ಯಂತ ದೊಡ್ಡದಾದ ಹಡಗು ತಯಾರಾಯಿತು, ಅದರ ಉದ್ದ ಎಷ್ಟೆಂದರೆ ಅದರಲ್ಲಿ ಪ್ಯಾರಿಸ್‌ನ ಎಫೆಲ್ ಟವರ್ ಕೂಡ ಮಲಗಬಹುದು, ಅದಕ್ಕಿಂತಲೂ ಭಾರಿಯಾದ 180,000 ಟನ್ ಮತ್ತು 205,000 ಟನ್ ಹಡಗುಗಳೂ ತಯಾರಾಗುತ್ತಿವೆ. ಜಪಾನೀಯರು ಹಡಗು ತಯಾರಿಕೆಗೆ ಅಮೇರಿಕ ಬ್ರಿಟನ್ನಿನವರು ತೆಗೆದುಕೊಳ್ಳುವ ಕಾಲದ ಅರ್ಧದಷ್ಟು ಮಾತ್ರ ತೆಗೆದುಕೊಳ್ಳುತ್ತಾರೆ; ಅವರ ಖರ್ಚಿಗಿಂತ ಬಹು ಕಡಿಮೆ ಖರ್ಚು, ಜಪಾನ್ "ಏಷ್ಯದ ವರ್ಕ್‌ಷಾಪ್" ಎಂಬ ಹೆಸರನ್ನು ಗಳಿಸಿದೆ, ಜನರು ಬಹು ಪರಿಶ್ರಮಿಗಳು.

ಕಾರ್ಖಾನೆ, ಆಫೀಸ್, ಬ್ಯಾಂಕ್, ಟ್ರಾಫಿಕ್ ನಿಯಂತ್ರಗಳಿಗೆಲ್ಲಾ ಎಲೆಕ್ಟ್ರಾನಿಕ್ ಕ್ರಮಗಳು ಪ್ರಚಾರದಲ್ಲಿವೆ. ಕಂಪ್ಯೂಟರ್‌ಗಳು ಅದ್ಭುತ ಕಾರ್ಯಗಳನ್ನು ನಡೆಸುತ್ತಿವೆ. ಟೋಕಿಯೋ ಕಾರ್ಖಾನೆಯೊಂದರಲ್ಲಿ ಈಗ ಕೇವಲ ಇಬ್ಬರೇ ಹುಡುಗಿಯರು ದಿವಸಕ್ಕೆ 1000 ರೇಡಿಯೋಗಳನ್ನು ಜೋಡಿಸುತ್ತಾರೆ. ನೂರಾರು ಮಂದಿ ಇದ್ದ ರಾಸಾಯನಿಕ ಕಾರ್ಖಾನೆಯನ್ನು ಈಗ ನಾಲ್ಕೇ ಜನರು ನಿಯಂತ್ರಿಸುತ್ತಿದ್ದಾರೆ. ವೈಜ್ಞಾನಿಕ ಅನ್ವೇಷಣೆಗಳು ಬಹಳ ಮುಂದುವರಿದಿವೆ. ವೈಜ್ಞಾನಿಕ ಸಂಶೋಧಕರು, ಅಮೆರಿಕವನ್ನು ಬಿಟ್ಟರೆ ಇಲ್ಲಿಯಷ್ಟು ಇನ್ನೆಲ್ಲೂ ಇಲ್ಲ. ಯುದ್ಧಕಾಲದಲ್ಲಿ ಜಪಾನ್ ಪ್ರಧಾನಿಯ ಮಗಳು ಭಾರತದ ಬಗ್ಗೆ ಅಧ್ಯಯನ ಮಾಡಿ ಡಾಕ್ಟರೇಟ್ ಪ್ರಶಸ್ತಿಯನ್ನು ಗಳಿಸಿದ್ದಳಂತೆ.

ಮುತ್ತಿನ ಉದ್ಯಮ ಟೋಕಿಯೋದ ಮುಖ್ಯ ಕೈಗಾರಿಕೆ. ಈ ಕಲೆಯಲ್ಲಿ ಜಪಾನಿಗೆ ಸರಿಸಮವಾಗಿ ಸ್ಪರ್ಧಿಸುವವರಿಲ್ಲ, ಯಾರಿಗೂ ಸಾಧ್ಯವಾಗದಿದ್ದ ಗೋಲಾಕಾರದ ಮುತ್ತಿನ ರಚನೆ ಜಪಾನಿಗೆ ಮಾತ್ರ ಸಾಧ್ಯವಾಯಿತು. ಮನೆಗೊಂದು ಗೃಹಕೈಗಾರಿಕೆ, ಪ್ರತಿ ಮನೆಯೂ ಒಂದೊಂದು ಗೃಹಕೈಗಾರಿಕೆಯ ಸ್ಥಾನ. ಮನೆಮನೆಯಲ್ಲಿ ಬಹು ನಿಪುಣ ಹಸ್ತಕೌಶಲ ಕೆಲಸಗಳು ನಡೆಯುತ್ತವೆ. ಇಲ್ಲಿರುವಷ್ಟು ಚತುರ ಶಿಲ್ಪಿಗಳು ವಿಶ್ವದಲ್ಲಿ ಇನ್ನೆಲ್ಲೂ ಇಲ್ಲ. ಹೆಚ್ಚು ಕಡಿಮೆ ಪ್ರತಿಯೊಂದು ಮನೆಯಲ್ಲೂ ಒಂದು ರೇಡಿಯೋ ಇದೆ. ಪ್ರತಿ ನಾಲ್ಕು ಮನೆಗಳೊಂದ ರಲ್ಲಿ ಟೆಲಿವಿಷನ್ ಸೆಟ್ ಇದೆ. ಇಲ್ಲಿ ಅಮೆರಿಕಕ್ಕಿಂತ ಹೆಚ್ಚು ವೃತ್ತ ಪತ್ರಿಕೆಗಳು ಮಾರಾಟವಾಗುತ್ತವೆ. ಭಿಕ್ಷು ಕರಿಲ್ಲ, ನಿರಕ್ಷರತೆಯಿಲ್ಲ, ಅರಳೆ, ಉಣ್ಣೆ, ಪೆಟ್ರೋಲಿಯಂ, ಕಲ್ಲಿದ್ದಲು ಲೋಹದ ಅದಿರುಗಳಂಥ ಕಚ್ಚಾ ವಸ್ತುಗಳು ಇಲ್ಲಿ ಸಿಗುವುದಿಲ್ಲ, ಭಾರತ ಮತ್ತಿತರ ದೇಶಗಳಿಂದ ಅವು ಗಳನ್ನು ಆಮದು ಮಾಡಿಕೊಂಡು ಅವುಗಳಿಂದ ಸಿದ್ಧ ಪಡಿಸಿದ ವಸ್ತುಗಳನ್ನು ಬ್ರಿಟನ್ ಅಮೇರಿಕ, ರಶಿಯಗಳ ಉತ್ಪನ್ನಗಳೊಡನೆ ಸ್ಪರ್ಧಾತ್ಮಕ ಬೆಲೆಯಲ್ಲಿ ಜಪಾನ್ ರವಾನಿಸುತ್ತದೆ. ಪೂರ್ವ, ಪಶ್ಚಿಮ ಮತ್ತು ಆಫ್ರಿಕಾ ದೇಶಗಳಿಗೆ ಜಪಾನ್ ತನ್ನ ತಯಾರಿಕೆಗಳನ್ನು ಕಳಿಸಿ ಇತರ ದೇಶಗಳ ಉತ್ಪನ್ನಗಳೊಂದಿಗೆ ಪೈಪೋಟಿ ನಡಸುತ್ತದೆ. ವ್ಯವಸಾಯ ಯೋಗ್ಯ ಭೂಮಿ ಶೇಕಡ 15 ರಷ್ಟೇ ಇದ್ದರೂ ಸಾಂದ್ರ ಸಾಗುವಳಿ ಕ್ರಮದಿಂದ ಅತ್ಯಧಿಕ ವ್ಯವಸಾಯೋತ್ಪನ್ನ ದೊರೆಯುತ್ತದೆ. ಕೇವಲ 5-10 ಎಕರೆಗಳಷ್ಟು ಹಿಡುವಳಿ ಮಿತಿಗಳಿದ್ದರೂ ಎಕರೆವಾರು ಉತ್ಪಾದನೆಯಲ್ಲಿ ಜಪಾನ್ ಅದ್ವಿತೀಯ ಸ್ಥಾನಗಳಿಸಿದೆ ಜಪಾನ್ ಮಾದರಿ ಭತ್ತ ಸಾಗುವಳಿ ಜಗದ್ವಿಖ್ಯಾತವಾಗಿದೆ ಗೇಣಗಲದ ಪರ್ವತ ತಪ್ಪಲುಗಳನ್ನೂ ಅವರು ಬಿಡುವು ದಿಲ್ಲ, ಭಾರತದ $\frac{1}{10}$ ಕ್ಷೇತ್ರದಲ್ಲಿ ಭಾರತದ ⅓ ಪಟ್ಟು ಭತ್ತ ಬೆಳೆಯುತ್ತದೆ, ಪ್ರತಿ ಮಗುವೂ ಸಲಿಕೆಯಿಂದ ಕಳೆ ಕೀಳುವುದನ್ನು ಕಲಿತಿದೆ.

ಟೋಕಿಯೋದ ಗಿನ್‌ಜಾ ಎಂಬ ವಿಭಾಗವು ಅಪೂರ್ವ ಸೊಬಗಿನ ಅಂಗಡಿ ಶ್ರೇಣಿಗಳ ಕೇಂದ್ರ- ಜೇನುಗೂಡಿನಂತೆ ಸದಾ ಅತ್ಯಂತ ಚಟುವಟಿಕೆಯ ಕ್ಷೇತ್ರ ಅಸಂಖ್ಯಾತ ಉದ್ಯಮಗಳು, ಕೋಟಿ ಕೋಟಿ ರೂಪಾಯಿ ಬೆಲೆಗಳ ವಿವಿಧ ಸರಕುಗಳು ಪೈಪೋಟಿಯಲ್ಲಿ ಇಲ್ಲಿ ವಸ್ತು ಪ್ರದರ್ಶನ ಮಂದಿರಗಳಂತೆ ಪ್ರದರ್ಶಿತವಾಗಿವೆ. ಏಳು ಅಂತಸ್ತಿನ "ಸೋನಿ" ಮಹಲ್ ಬಹು ವಿಸ್ಮಯ ಕಾರಿ ಅಂಗಡಿ, "ಇಲ್ಲಿ ಸಿಕ್ಕದಿರುವ ವಸ್ತುಗಳೇ ಇಲ್ಲ"

ವೆಂಬುದು ಮನೆಮಾತಾಗಿದೆ. ಹತ್ತುವಾಗ ಗಿರಾಕಿಗಳಿಗೆ ದಣಿವೇ ತೋರುವುದಿಲ್ಲ. "ದಾಯ ಮಾರೂ" ಎಂಬ ಏಳಂತಸ್ತಿನ ಮಳಿಗೆಯಲ್ಲಿ ಸೂಜಿಯಿಂದ ಹಿಡಿದು ರಾಕ್ಷಸ ಎಂಜಿನ್‌ವರೆಗೆ ಏನು ಬೇಕಾದರೂ ದೊರೆಯುತ್ತದೆ. ಒಂದು ಅಂತಸ್ತಿನಿಂದ ಇನ್ನೊಂದಕ್ಕೆ ಹೋಗಲು ಚಲಿಸುವ ಮೆಟ್ಟಿಲುಗಳಿವೆ(ಎಸ್ಕಲೇಟರ್). ಅವುಗಳ ಮೇಲೆ ನಿಂತರೆ ಅವು ತಂತಾನೇ ಸರಿಯುತ್ತ ಬೇಕಾದ ಅಂತಸ್ತಿಗೆ ಒಯ್ಯುತ್ತವೆ. ಅವು ಸದಾ ಚಲಿಸುತ್ತಲೇ ಇರುತ್ತವೆ. ತರಕಾರಿ, ಕಟ್ಟಿಗೆ ಮದುವೆಗಳಿಗಾಗಿ ದೊಡ್ಡ ಕಲ್ಯಾಣ ಮಂಟಪ, ಮಕ್ಕಳ ಮನರಂಜಿಸಲು ದೊಡ್ಡ ಸಿನಿಮಾ ಮಂದಿರಾ ಮುಂತಾದುವೆಲ್ಲಾ ಇವೆ. ಒಂದು ಅಂಗಡಿ ಎಂದರೆ ಸುಸಜ್ಜಿತ ಸಣ್ಣ ಊರು ಇದ್ದಂತೆ. ಎಲ್ಲ ಅಂಗಡಿಗಳಲ್ಲೂ 18-20 ವಯಸ್ಸಿನ ಕನ್ಯೆಯರು ಕೆಲಸ ಮಾಡುತ್ತಾರೆ ಇದೊಂದೇ ಅಂಗಡಿಯಲ್ಲಿ 4000 ಹುಡುಗಿಯರು ಕೆಲಸ ಮಾಡುತ್ತಾರೆ. ಒಂದು ದಿನವಲ್ಲಿ ಈ ಅಂಗಡಿಯಲ್ಲಿ 50 ಲಕ್ಷ ರೂಪಾಯಿಗಳಷ್ಟು ವ್ಯಾಪಾರವಾಗುತ್ತದೆ.

ಜಪಾನೀಯರಿಗೆ ಉದ್ಯಾನಗಳಲ್ಲಿ ಬಹು ಅಭಿರುಚಿ. ಮನೆಗೂ, ತೋಟಕ್ಕೂ ಸಂಪೂರ್ಣ ಸಂಯೋಗವಿದೆ.. "ತೋಟವಿಲ್ಲದೆ ಮನೆಯಿಲ್ಲ" ಎಂಬ ಭಾವನೆ ಅವರಿಗೆ ರಕ್ತಗತವಾಗಿದೆ. ಮನೆಯವರು ಪ್ರಕೃತಿಯಲ್ಲಿ ಐಕ್ಯವಾಗಿರುವಂತೆ ಹೊರಾಂಗಣವು ಮನೆಯ ಒಳಭಾಗಕ್ಕೆ ಹೊಂದಿಕೊಂಡಿದೆ. ಟೋಕಿಯೋದಲ್ಲೇ 250 ಉದ್ಯಾನಗಳಿವೆ ಟೋಕಿಯೋದಲ್ಲಿ ಅತ್ಯಾಶ್ಚರ್ಯಕರವಾದ ಒಂದು ದೃಶ್ಯವಿದೆ. ಸ್ವಾಭಾವಿಕವಾಗಿ 10-15 ಅಡಿ ಎತ್ತರ ಬೆಳೆಯುವ ನಾನಾ ಜಾತಿಯ ಮರಗಳ ಬೀಜಗಳನ್ನು ಪಿಂಗಾಣಿ ಪುಷ್ಪಕುಂಭಗಳಲ್ಲಿ ನೆಟ್ಟು, ಗಿಡವು ಮೇಲಕ್ಕೆ ಬೆಳೆಯುವುದನ್ನು ತಡೆ ಹಾಕಿ, ಅಡ್ಡವಾಗಿ, ಸಮಕಟ್ಟಿಗೆ ಸರಿಸುತ್ತಿ ಅಥವಾ ಅಧೋಮುಖವಾಗಿ ಬೆಳೆಯುವಂತೆ ಮಾಡುತ್ತಾರೆ ಇದರಿಂದ ಗಿಡಗಳು ಬಹು ಗಿಡ್ಡಾಗಿ ಎರಡು ಅಡಿ ಅಥವಾ ಇನ್ನೂ ಕಡಿಮೆ ಎತ್ತರದಲ್ಲಿ ರತ್ತವೆ. 80 ವರ್ಷ ವಯಸ್ಸಿನ ಗಿಡ 12 ಅಂಗುಲ ಎತ್ತರ, ಎಲ್ಲಕ್ಕಿಂತಲೂ ವೃದ್ಧವಾದ 150-200 ವರ್ಷಗಳ ದೇವದಾರು ಮರವು ಎರಡು ಅಡಿ ಮಾತ್ರ ಎತ್ತರ.

ಟೋಕಿಯೋ ಸುಸಂಸ್ಕೃತ ನಗರ. ಜಪಾನಿನ 465 ಕಾಲೇಜು ಮತ್ತು ವಿಶ್ವವಿದ್ಯಾನಿಲಯಗಳಲ್ಲಿ ಟೋಕಿಯೋದಲ್ಲಿಯೇ 146 ಇವೆ. ಲಲಿತಕಲಾ ಅಕಾಡೆಮಿಗಳು, ಭವ್ಯ ನಾಟಕ ಮಂದಿರಗಳು, ಹತ್ತು ಭಾರಿ ಮ್ಯೂಜಿಯಂಗಳು, ಪುಸ್ತಕ ಭಂಡಾರಗಳು, ಚಿತ್ರಕಲಾ ಗ್ಯಾಲರಿಗಳು, ವಿಜ್ಞಾನ ಮ್ಯೂಜಿಯಂಗಳು ಬಹು ಆಕರ್ಷಕವಾಗಿವೆ. ಹಬ್ಬದಿನಗಳಂದು ಮನೆ, ಬೀದಿಗಳ ಶೃಂಗಾರದಲ್ಲಿ ಅಮೋಘ ಕಲಾಭಿರುಚಿ ವ್ಯಕ್ತವಾಗುತ್ತದೆ. ನಾಲ್ಕು ಬಗೆ ನಾಟಕಗಳಿವೆ—ಕಬೂಕಿ, ನೋಹಾ, ಆಧುನಿಕ ನಾಟಕ ಮತ್ತು ಚಲನ ಚಿತ್ರ. "ನೋಹಾ"ದಲ್ಲಿ ಮುಖವಾಡಗಳನ್ನು ಧರಿಸಿ ಆಡುತ್ತಾರೆ. ಕೋಟೋ ಎಂಬ ವಾದ್ಯದಲ್ಲಿ ಮೇಣಸವರಿದ 13 ರೇಷ್ಮೆ ತಂತಿಗಳಿವೆ. ಒಂದು ಕೈಯಲ್ಲಿ ತಂತಿಗಳನ್ನು ಮೀಟಿ ಇನ್ನೊಂದು ಕೈಯಿಂದ ಮಟ್ಟಿನ ಪರಿಮಿತಿಯನ್ನು ನಿಯಂತ್ರಿಸಲಾಗುತ್ತದೆ. ಸುಂದರ ಮಹಿಳೆಯರು ಮನರಂಜಿಸುವ ವೇಷಭೂಷಣಗಳನ್ನು ಧರಿಸಿ ಮಧುರ ಗಾನ ಅಭಿನಯಗಳಿಂದ ಪ್ರದರ್ಶಿಸುವ "ಗೈಷಾ" ನೃತ್ಯವು ಜಪಾನಿನ ವೈಶಿಷ್ಟ್ಯ. ಅನೇಕ "ನೈಟ್ ಕ್ಲಬ್" ಗಳಿವೆ ಸ್ತ್ರೀಯರಿಗಾಗಿಯೇ ಪ್ರತ್ಯೇಕ "ನೈಟ್ ಕ್ಲಬ್" ಇದೆ. ಇದು ಟೋಕಿಯೋ ವಿನಾ ಪೃಥ್ವಿಯಲ್ಲಿ ಇನ್ನೆಲ್ಲೂ ಇಲ್ಲ. ಲಂಡನ್ ನ್ಯೂಯಾರ್ಕ್‌ಗಳಲ್ಲೂ ಇಲ್ಲ.

ಹಿಂದಿನ ಕಾಲದಲ್ಲಿ ಜಪಾನಿನ "ಸಾಮುರಾಯ್ ಎಂಬ ವೀರ ತಂಡವು ಬುಷಿಡೋ ಎಂಬ ನಿಯಮವನ್ನು ಸ್ಥಾಪಿಸಿತು. ಶೌರ್ಯ, ಗೌರವ, ಕೀರ್ತಿ, ಮನಸ್ಥೈರ್ಯ ವಿನಯ ಶೀಲತೆ, ರಾಜನಿಷ್ಠೆ —ಇವು ಆ ತತ್ವದ ಆಸ್ತಿವಾರ. ಅಪಮಾನದಿಂದ ಪಾರಾಗಲು, ರಾಜನಿಷ್ಠೆಯನ್ನು ಪ್ರಮಾಣಪಡಿಸಲು, ತಪ್ಪಿಗೆ ಪ್ರಾಯಶ್ಚಿತ್ತ ಮಾಡಿಕೊಳ್ಳಲು ಜಪಾನಿಯರು ತಮ್ಮನ್ನು ತಾವೇ ಆಹುತಿಕೊಡುವ "ಹರಾಕಿರಿ" ಸಂಪ್ರದಾಯ ಇನ್ನೂ ಆಚರಣೆಯಲ್ಲಿದೆ. ಇದು ಆತ್ಮ ಹತ್ಯವಲ್ಲ; ಪವಿತ್ರ ಶಿಷ್ಟಾಚಾರ, ಸಂಸ್ಕಾರ. ಅದು ಯೋಧರಿಗೆ ಯುದ್ಧದಲ್ಲಿ ವೀರಾವೇಶದಿಂದ ಹೋರಾಡಿ ಪರಮಾನಂದದಿಂದ ಪ್ರಾಣ ನೀಗಲು ಸ್ಫೂರ್ತಿ ಕೊಡುತ್ತದೆ. ಜಪಾನಿಯರ ದೇಶಪ್ರೇಮ ಅಪಾರವಾದುದ್ದು.

ಒಳ್ಳೆಯದನ್ನು ಇತರ ದೇಶಗಳಿಂದ ಆರಿಸಿ

(26 ನೇ ಪುಟ ನೋಡಿ)

# ಶಿವಶರಣ ಮೈದುನರಾಮಯ್ಯ

ನಂಬಿದವನೆದೆಯಲ್ಲೆ ಶಂಭು ತಾ ನೆಲೆಸುವನು ಎಂಬ ಭಕ್ತ ಶ್ರೇಷ್ಠರ ವಾಣಿ ಹುಸಿಯಲ್ಲನೆಂಬುದನ್ನು ಸಾರುತ್ತದೆ. ಶರಣ ಮೈದುನ ರಾಮಯ್ಯನ ಚರಿತೆ. ಜಗನ್ಮಾತೆ ಪಾರ್ವತಿಗೇ ಮೈದುನ ನೆನೆಸಿದ ಚೆನ್ನಿಗರಾಮನ ಅಚಲ ನಂಬಿಕೆಯು ಶಿವ-ಪಾರ್ವತಿಯರನ್ನೇ ಧರೆಗಿಳಿಸಿ ತರುವಲ್ಲಿ ನೆರವಾಯಿತು.

—ಶ್ರೀ ಎಸ್. ಎಸ್. ಭೂಸರೆಡ್ಡಿ

ಅರವತ್ಮೂರು ಪುರಾತನರಂತೆ ಬಾಳಿದ ನೂತನ ಶರಣರಲ್ಲಿ ಮೈದುನ ರಾಮಯ್ಯನು ಒಬ್ಬನಾಗಿದ್ದಾನೆ. ಧೃವನಂತೆ ಧೃಡ ನಿಷ್ಠೆಯುಳ್ಳ ಶಿವಯೋಗಿ ಸಿದ್ಧರಾಮನಂತೆ ಆತ್ಮಾರ್ಪಣೆ ಮಾಡಿದ ಮಾರ್ಕಂಡೇಯನಂತೆ ಪ್ರತ್ಯಕ್ಷ ಶಿವದರ್ಶನ ಪಡೆದ ಪುಣ್ಯಪುರುಷ ಮುಗ್ಧ ಭಕ್ತಿಯ ಪರಾಕಾಷ್ಠೆಯನ್ನು ಮೆರೆದ ಕೀರ್ತಿ ಇವನದು

ಓಹಿಲ, ಉದ್ಭಟ, ಸಾನಂದ ಗಣೇಶ ರಂತೆ ಗಣಾತದವಿ ಪಡೆದುದೇನೊ ನಿಜ; ಆದರೆ ಶಿವಪಾರ್ವತಿಯರನ್ನು ತನ್ನೂರಿಗೆ ಕರೆದು ಕೊಂಡು ಹೋಗಿ ಪೆರವಣಿಗೆ ಮಾಡಿಸಿ ಗ್ರಾಮದ ಸರ್ವರಿಗೂ ಶಿವ-ಪಾರ್ವತಿಯರ ಪ್ರತ್ಯಕ್ಷ ದರ್ಶನ ಮಾಡಿಸಿದ ಹಿರಿಮೆ ಈತನದು. ಶರಣರು ಭಕ್ತಿಗೆ ಅದೆಷ್ಟು ಮಹತ್ವಕೊಟ್ಟಿದ್ದರೆಂಬುದಕ್ಕೆ ಈತನ ಕಥೆಯು ಒಂದು ಉತ್ತಮ ನಿದರ್ಶನ. ಇವನ ಪಾವನ ಚರಿತ್ರೆ ಕನ್ನಡಿಗರ ಮೇಲೆ ವಿಶೇಷ ಪ್ರಭಾವ ಬೀರಿದಂತೆ ತೋರುತ್ತದೆ. ಅಚ್ಚಕನ್ನಡ ಛಂದಸ್ಸುಗಳಾದ ರಗಳೆ, ತ್ರಿಪದಿ, ಸಾಂಗತ್ಯ ಮೊದಲಾದ ಕಾವ್ಯ ಪ್ರಭೇದಗಳಲ್ಲಿ ಈತನ ಜೀವನ ಚರಿತ್ರೆ ಕಾವ್ಯವಾಹಿನಿಯಾಗಿ ಹರಿದಿದೆ; ಕವಿಗಳ ಮನವನ್ನು ಮಿಡಿದಿದೆ. ನಮಗೆ ದೊರೆತ ಆಧಾರಗಳ ಮೇಲೆ ಆತನ ಸ್ಥೂಲ ಚಿತ್ರವನ್ನು ಚಿತ್ರಸುವ ಪ್ರಯತ್ನ ಇಲ್ಲಿ ಮಾಡಲಾಗಿದೆ. ಈ ಬಗೆಗೆ ಇನ್ನೂ ಹೆಚ್ಚಿನ ಸಂಶೋಧನೆ–ವಿವೇಚನೆ–ವಿಶ್ಲೇಷಣೆ ಆಗುವುದು ಮಾತ್ರ ಅತ್ಯಗತ್ಯವೆಂಬ ಮಾತನ್ನು ವಿನಮ್ರನಾಗಿ ಸೂಚಿಸ ಬಯಸುತ್ತೇವೆ.

ಭೀಮವತಿಯೆಂಬ ಶಿವಪುರ. ಅಲ್ಲಿ ಸೋಮಯ್ಯನೆಂಬ ಶಿವಭಕ್ತನಿದ್ದನು. ಮಹಾದೇವಿ ಆತನ ಶಿರೋಮಣಿ ಪತಿಭಕ್ತಿಪರಾಯಣೆ ಪುಣ್ಯ ದಂಪತಿಗಳ ಏಕಮೇವ ಪುತ್ರರತ್ನ; ಚೆನ್ನಿಗರಾಮ ತಂದೆ ಸೋಮಯ್ಯ ಮಗನಿಗೆ ಉತ್ತಮಶಿಕ್ಷಣ ಕೊಡಿಸುವ ತವಕ ದುರ್ದೈವದಿಂದ ಆತನು ಆಕಸ್ಮಿಕವಾಗಿ ಮರಣಹೊಂದಿದ. ವಿಧಿ ವಿಲಾಸ ವಿಚಿತ್ರವಾದುದು. ಮಗು ರಾಮ ಪರದೇಶಿಯಾದ. ಆದರೂ ಆತನ ತಾಯಿ ಮಹಾದೇವಿ ಧೈರ್ಯಗೆಡದೆ ಮಗುವನ್ನು ಮುದ್ದಿನಿಂದಲೇ ಬೆಳೆಸಿದಳು. ತನ್ನ ಸರ್ವಸ್ವವನ್ನೂ ಆತನ ಬೆಳವಣಿಗೆಗಾಗಿ ಮೀಸಲಿಟ್ಟಳು. ಪತಿಯ ಇಚ್ಛೆಯನ್ನು ಪೂರೈಸಲು ಮುಂದಾದಳು. ಅವನನ್ನು ಮಠಕ್ಕೆ ಕಳಿಸಿದಳು. ತ್ರಿಪದಿ ಕಾವ್ಯದಲ್ಲಿ ಈ ವಿಷಯ ಹೀಗೆ ಬರೆದಿದೆ.

ಕಂದನ ಕೈಹಿಡಿದು ಬಂದಳೋದುವ ಮಠಕ।
ತಂದು ಕಾಣಿಕೆಯ ಮಡಗಿದಳು। ಗುರುವಿಗೆ
ಕಂದಗ ವಿದ್ಯೆ ಕಲಿಸಯ್ಯ॥

ನೆನೆಯುಕ್ಕಿ ನೆನೆಗಡಲಿ। ಗೊನೆಯ ಬಾಳೆಹಣ್ಣು
ಇನಿಯ ಕಬ್ಬುಗಳು ಎಳೆನೀರು। ಮಹಾದೇವಿ
ತನುಜನಳೊಂದು, ಮಡಗಿದಳು॥

**ಸಂಸ್ಕೃತಿ ಪೂಜೆಯು ಹರುಷದಿಂದಲಿ ಮಾಡಿವಳು**
**ಬರಸಿದ ಭೂಮಿುಲಿಪಿಗಳನು। ಸರಸ್ವತಿ**
**ವರವ ಕುಡು ನನ್ನ ಸುತನೀಗೆ॥**

ಮೇಲಣ ತ್ರಿಪದಿಗಳಲ್ಲಿ ತಾಯಿುಯ ಅಪಾರ ವಾತ್ಸಲ್ಯ ಚನ್ನಾಗಿ ಮೂಡಿ ಬಂದಿದೆ. ಅವಳ ವಿದ್ಯಾ ಪ್ರೇಮ, ಮಗುವಿನ ಭವ್ಯ ಭವಿಷ್ಯತ್ತಿಗಾಗಿ ಆಕೆಯು ಪಡುವ ವಿಶೇಷ ಬವಣೆಗಳನ್ನು ಕವಿಯು ಚನ್ನಾಗಿ ಅಭಿವ್ಯಕ್ತ ಪಡಿಸಿರುವುದನ್ನು ಗಮನಿಸಬೇಕು. ಅಂದಿನ ಕಾಲದ ಶಿಕ್ಷಣ ಪದ್ಧತಿಯ ಮೇಲೆಯೂ ವಿಶೇಷ ಬೆಳಕು ಬೀರಿದ್ದಾನೆ. ಗುರುವಿಗೆ ಅಂದು ಪ್ರಾಧಾನ್ಯತೆ ಹೆಚ್ಚು. ಗುರುದಕ್ಷಿಣೆಯನ್ನು ಕೊಡುವ ಪದ್ಧತಿ ಆಗ ಸಾರ್ವತ್ರಿಕವಾಗಿತ್ತೆಂದು ಹೇಳಬಹುದು.

ಮಗರಾಮನ ವಿದ್ಯಾಭ್ಯಾಸದ ಬಗೆಗೆ ತಾಯಿ ವಹಿಸಿದ ಪಾತ್ರ ಹಿರಿದು. ಅಂತೆಯೇ ರಾಮನ ವಿದ್ಯಾಭ್ಯಾಸ ಚೆನ್ನಾಗಿ ನಡೆಯಿತು. ಹೆಚ್ಚಿನ ಜ್ಞಾನ ಸಂಪಾದನೆ ಮಾಡಿಕೊಂಡು ಹೀಗಯೇ ದಿನಗಳು ಉರುಳಿದವು. ದೀಪಾವಳಿ ಹಬ್ಬ ಬಂದಿತು; ಮಕ್ಕಳಿಗೆ ಹಿಗ್ಗು ತಂದಿತು. ಭಾವನ ಹಬ್ಬವನ್ನು ಸಡಗರದಿಂದ ಆಚರಿಸಿದರು. ಆಗ ರಾಮನ ಪರಿಸ್ಥಿತಿ ವಿಪರೀತ. ಆತನ ಓರಿಗೆಯ ಗೆಳೆಯರು ಅಪಹಾಸ್ಯ ಮಾಡಿದರು; ಕೇಕೆಹಾಕಿ ಕುಪ್ಪಳಿಸಿದರು

**ಹುಟ್ಟು ಮುಂಡಿಯ ಮಗನೆ। ಸೊಕ್ಕು**
**ಬಿಡೆಲೋರಾಮ।**
**ಅಕ್ಕಭಾವಗಳು ನಿನಗಿಲ್ಲ। ಯೆಂಬೂತ**
**ವತ್ತಿಲಿದ್ದವರೆಲ್ಲ ನುಡಿದಾರು॥**

**ಹುಡಹುಟ್ಟ ನಿಮ್ಮನ್ನ। ಪಡಿಯು ಬೇಡಿಕೊಂಡು**
**ವಡಲ ಹೊರಕೊಂಡುಯಿರುವಳ।**
**ವಡಲಿಗೆ ವಡಹುಟ್ಟಿದವರು ನಿನಗಿಲ್ಲ।**

ಎಂದಾಗ ರಾಮನ ಮನಸ್ಸಿಗೆ ಬಹಳ ನೋವಾಯಿತೆಂದು ಬೇರೆ ಹೇಳಬೇಕಾಗಿಲ್ಲ.

ಓದುವ ಮಕ್ಕಳ ನುಡಿಗೇ ಳಿರಾಮಯ್ಯ ಪ್ರಾಣ ಹೋದಂತೆ ತಲೆಬಾಗಿ ಕಣ್ಣೀರು ಸುರಿಸುತ್ತ ಮನೆಗೆ ಬಂದ. ತಾಯಿಗೆ ನಡೆದ ಸಂಗತಿ ವಿವರಿಸಿದ. ತಾಯಿಯ ಕಣ್ಣೀರು ಕೋಡಿವರಿಯಿತು. ಆಕೆಯು ಸಂಕಟವನ್ನು ವರ್ಣಿಸಲಸದಳ. ಆದರೂ ಧೈರ್ಯಬಿಡಲಿಲ್ಲ. ಕಂಗೆಡಲಿಲ್ಲ. ಮಗುವಿನ ಕೋಮಲ ಮನದ ಮೇಲೆ ವಿಪರೀತ ಭಾವನೆ ಮೂಡದಂತೆ-ದಕ್ಷತೆ ವಹಿಸಿದಳು. ಬಹಳ ಮುಂದಾಲೋಚನೆಯಿಂದ ಆತನಿಗೆ ಮಾರ್ಗದರ್ಶನ ಮಾಡಿದಳು. ಸರಿಯಾದ ಸಲಹೆ-ಸೂಚನೆ ನೀಡಿದಳು. ಆಕೆ ಮಗುವಿನ ಮುಂದಿನ ಜೀವನ ಪಾವನವಾಗಲು ತಕ್ಕ ಯೋಜನೆಗಳನ್ನು ಹಮ್ಮಿಕೊಂಡಳು.

**ನಿಂಮುಕ್ಕ ಗೌರವ್ವ ಭಾವನು ಚೆನಮಲ್ಲ।**
**ಚಿಕ್ಕಸೋದರನೆ ಬಸವಣ್ಣ। ವೀರಣ್ಣ**
**ಮಿಕ್ಕ ಬಾಂಧವರು ಶರಣರು॥**

ಎಂದು ಹೇಳಿ ಆತನಿಗೆ ಬಂದ ಸಂಕಟನ್ನು ದೂರಮಾಡಿದಳು. ರಾಮನಿಗೆ ಸಮಾಧಾನವಾಗಲಿಲ್ಲ. ಅವನು ಅವರು ಇರುವ ಸ್ಥಳವನ್ನು ಹೇಳಬೇಕೆಂದು ತಾಯಿಯನ್ನು ಪರಿಪರಿಯಿಂದ ಕಾಡಿದ, ಬೇಡಿದ. 'ಗತಿ ನಿನಗೆ ಗೌರಮ್ಮ, ಮತಿ ನಿನಗೆ ಮಲ್ಲಯ್ಯ" ನೆಂದು ಅವರು ಇರುವ ಸ್ಥಾನ ನಿರ್ದೇಶನ ಮಾಡಿದಳು. ರಾಮ ಹೊರಟೇಬಿಟ್ಟ. ಬಿಟ್ಟ ಬಾಣದಂತೆ. ' ಮಹಾದೇವಿ ಕುಟ್ಟಿದಳು ಕಣಕವ ರೊಟ್ಟಿ ಕಜ್ಜಾಯವ. 1 ಘಟ್ಟಿ ತುಪ್ಪದಲಿ ಹದಮಾಡಿ ಬುತ್ತಿ ರೊಟ್ಟಿ ಮಾಡಿ ಅವನ ಕೈಗೆ ಕೊಟ್ಟಳು. ಅಕ್ಕ ಭಾ ವ ರ ನ್ನು ಕ ರೆ ದು ಕ ರೆ ದು ಕೊ ಂಡೇ ಮ ನೆ ಗೆ ಬರುವೆನೆಂಬ ಧೃಡ ನಿರ್ಧಾರ ಅವನದ್ದಾಗಿತ್ತು. 'ಕರಕೊಂಡು ಬರುವೇನು ಹರನಾಣೆ, ನಿನ್ನಾಣೆ, ಪುರಾತನಣೆ, ಶಿವನಾಣೆರಾ -ಎಂದು' ಪ್ರತಿಜ್ಞೆಯನ್ನೂ ಮಾಡಿದ ಶ್ರೀ ಶೈಲ ಪರ್ವತಕ್ಕೆ ನಡೆದೇ ನಡೆದ.

**ಕಂಡಿರೇ ತರುಗಳಿರ, ಕಂಡಿರೇ ಗಿರಿಗಳಿರ,**
**ಕಂಡಿರೇ ಅಳಿಗಳಿರ, ಕಂಡಿರೇ ಗಿಳಿಗಳಿರ**
**ನಮ್ಮಕ್ಕನಂ ಭಾವನಂ ಬೇಗದಿಂ ತೋರಿರಿ**
**ದಮ್ಮಯ್ಯಗಳಿರ ನಮ್ಮಯ್ಯಗಳಿರ ತೋರಿರಿ**

ಎಂದು ಅಕ್ಕಮಹಾದೇವಿಯಂತೆ ಪ್ರಲಾಪಿಸುವ ಸನ್ನಿವೇಶ ಓದುಗರ ಮನವನ್ನು ಕದಡುತ್ತದೆ. ಶ್ರೀಶೈಲದ ಪ್ರಶಾಂತವಾದ ಸ್ಥಳದಲ್ಲಿ ಕುಳಿತು ಘೋರ ತಪಸ್ಸನ್ನೇ ಕೈಕೊಂಡ.

ಮಲ್ಲಭಾವಾ ಮಲ್ಲಭಾವಾ ಬಾರಾಬಾರಾ
ಭಾವಬಾ ಮೂಜಗವದ ಕಾವ ಬಾ
ಹಬ್ಬಕ್ಕೆ ಕರೆಯ ಬಂದೆ ದೇವ ಭಾವ ಬಾ

ಎಂದು ಹಲಬುವನು.

ಕಲ್ಲಲಿಟ್ಟವಗೊಲಿದೆ, ಕಾಲಲಿಟ್ಟವಗೊಲಿದೆ,
ಬಿಲ್ಲಲಿ ಹೊಯಿದವಗೊಲಿದೆ, ಭಾವಯ್ಯ
ಯೆನಗೇಕೆ ? ನೀನು ದಯವಾಗೆ

ಎಂದು ಕೇಳುತ್ತಾನೆ.

ಕರೆಯ ಬಂದೆನೋ ಭಾವ, ತಿರುಗಿ ಹೋಗು
ವನಲ್ಲ। ನಿನ್ನ ಗಿರಿಯಲ್ಲಿ ಬಿಡುವೆ।
ಮಣಿವ ಭಾವಯ್ಯ.

ಎಂದು ಕೊಳ್ಳದಲ್ಲಿ ಹಾರಿಕೊಳ್ಳುವ ಪ್ರಯತ್ನ ಮಾಡಿದಾಗ ಶಿವ-ಪಾರ್ವತಿಯರು ಆತನಿಗೆ ದರ್ಶನವೀಯುತ್ತಾರೆ. ಆತನ ಕೇಳಿಕೆಯಂತೆ ಭೀಮರತಿಗೂ ಬರುತ್ತಾರೆ. ಊರಲ್ಲಿ ಶಿವಪಾರ್ವತಿಯರು ಮೆರವಣಿಗೆ ನಡೆಯುತ್ತಾರೆ. ಊರಿಗೆ ಊರೇ ಪ್ರತ್ಯಕ್ಷ ಶಿವ-ಪಾರ್ವತಿಯರ ದರ್ಶನ ಪಡೆದು ಪಾವನವಾಗುತ್ತದೆ- ಮ ಗು ರಾಮಯ್ಯನ ನಿರ್ಮಲವಾದ ನಿಷ್ಕಲ್ಮಶವಾದ ಭಕ್ತಿ ಬೆಳಕಿಗೆ ಬರುತ್ತದೆ. ಪಾರ್ವತಿ ರಾಮಯ್ಯನನ್ನು ಮೈದುನನೆಂದು ಅಪ್ಪಿ ಆನಂದಿಸುತ್ತಾಳೆ. ಆದುದರಿಂದಲೇ ಈತನಿಗೆ ಮೈದುನ ರಾಮಯ್ಯನೆಂದು ಹೆಸರು ಪ್ರಸಿದ್ಧವಾದಂತೆ ತೋರುವುದು. ಶಿವನು ಅವರ ಭಕ್ತಿಗೆ ಮೆಚ್ಚಿ ಗಣ ಪದವಿ ನೀಡುತ್ತಾನೆ.

ಓದುವ ಮಠದೊಳು ಮಕ್ಕಳು
ಮೂದಲಿಸಲು ತಾಯ ಮನವ ಕೇಳುತ
ನಿಮ್ಮೊಳು ವಾದಿಸಿ ಸರಸವನಾಡಿದ ಮೈದುನ
ರಾಮಯ್ಯ ಭಾವಾ"

ಹಾಗೆಯೇ ರಸ ಋಷಿಗಳೂ ಸಮನ್ವಯಾಚಾರ್ಯರೂ ಆದ ಮುಪ್ಪಿನ ಷಡಕ್ಷರಿಗಳೂ ಸಹ ಮೈದುನ ರಾಮಯ್ಯನ ನಾಮ ಸ್ಮರಣೆಯನ್ನು ತಮ್ಮ ಹಾಡುಗಬ್ಬಗಳಲ್ಲಿ ಧಾರಾಳವಾಗಿ ಮಾಡಿರುವುದನ್ನು ಗಮನಿಸಬೇಕು.

ಮೈದುನ ರಾಮಯ್ಯ ಕನ್ನಡದಲ್ಲಿ ಗೀತೆಗಳನ್ನು ಹಾಡಿದಂತೆ ತಿಳಿದು ಬರುತ್ತದೆ. ಇವನು ವಚನಗಳನ್ನೂ ಬರೆದಿದ್ದಾನೆ. ಇವನ ವಚನಗಳ ಅಂಕಿತ 'ಮಹಾಲಿಂಗ ಚೆನ್ನರಾಮ.' ಓದುಗರ ಅನುಕೂಲತೆಗಾಗಿ ಒಂದು ಉದಾಹರಣೆಯನ್ನು ಇಲ್ಲಿ ಉಲ್ಲೇಖಿಸಬಹುದಾಗಿದೆ.

ಮಳಲಲ್ಲಿ ರಸವುಂಟೆ ?
ನೆರಳಿಗೆ ತಡಿಯುಂಟೆ ?
ರಣದಲ್ಲಿ ತಪವುಂಟೆ ?
ನೇಹದ ತಪ್ಪಿದಲ್ಲಿ ಮೋಹನನರಸಲುಂಟೆ ?

ಮಹಾಲಿಂಗ ಚೆನ್ನರಾಮನ ಮುರಿದ ಬಳಿಕ ಕಂಗಳಿಗೆ ವಿಷವಯ್ಯ" ಮೇಲಣ ವಚನದಲ್ಲಿ ಅನುಭವವಿದೆ. ತತ್ವವಿದೆ. ಸುಂದರವಾದ ದೃಷ್ಟಾಂತಗಳಿವೆ. ಆದುದರಿಂದ ಇವನ ವಚನಗಳು ಜನತೆಯ ಗಮನಕ್ಕೆ ಬರಬೇಕಾಗಿದೆ. ಹೆಚ್ಚಿನ ಸಂಶೋಧನೆಯಾಗಬೇಕಾಗಿದೆ. ಇವನ ಕಾಲವನ್ನು ಕರ್ನಾಟಕ ಕವಿ ಚರಿತೆಕಾರರು ಸುಮಾರು ೧೧೬೦ ಎಂದು ಗುರುತಿಸಿದ್ದಾರೆ.

ಇಂಥ ಶರಣರು ಮೆರೆದ ನಾಡಿದು. ಶರಣ ಸಂಸ್ಕೃತಿಯ ಪರಿಮಳವು ಇಂದು ಎಲ್ಲ ಕಡೆಗೆ ಸೂಸಿ ಸೂಸಿ ಹರಡಬೇಕಾಗಿದೆ. ಮುಕ್ತಿಗೆ ಭಕ್ತಿಯೇ ಸಾಧನವೆಂಬ ನಿತ್ಯ ಸತ್ಯವಾದ ಮಾತನ್ನು ಸ್ಪಷ್ಟವಾಗಿ ತಿಳಿಯಬೇಕಾಗಿದೆ. ನಂಬು ನಂಬೆಲೋ ಮನವೇ ನಂಬಿದವರು ಕೆಟ್ಟಿಲ್ಲವೆಂಬ ಮಾತಿಗೆ ಮೈದುನ ರಾಮಯ್ಯನ ಕಥೆಯೇ ಶ್ರೇಷ್ಠ ನಿದರ್ಶನ. ಭಕ್ತಿ ಪ್ರಿಯನಾದ ಶಿವನನ್ನು ಕಾಣಲು ಭಕ್ತಿ ಶ್ರದ್ಧೆ ವಿಶ್ವಾಸಗಳೇ ಮೂಲ ಕಾರಣವೆಂಬುದನ್ನು ಗಟ್ಟಿಯಾಗಿ ತಿಳಿದಷ್ಟು ಶಿವನಿಷ್ಠೆ ಬೆಳೆಯುತ್ತದೆ. ಬೆಳೆದಂತೆ ಬಾಳು ಬೆಳಗುತ್ತದೆ. ಬೆಳಗಿದಂತೆ ಜೀವನ ಪಾವನವಾಗುತ್ತದೆ. ಮುಕ್ತಾಯ ಮಾರ್ಗವನ್ನು ಸುಲಭವಾಗಿ ಪಡೆಯುತ್ತದೆ.



[ ಹಿಂದಿನ ಸಂಚಿಕೆಯಿಂದ ]

# ವೈಭವ ಪೂರಿತ ವಜ್ರಮಹೋತ್ಸವ

ಕನ್ನಡ ಸಾಹಿತ್ಯ ಪರಿಷತ್ತು ತನ್ನ 60 ವರ್ಷಗಳ ಸೇವೆಯ ಸಂಕೇತವಾಗಿ ಆಚರಿಸಿದ ವಜ್ರಮಹೋತ್ಸವ ಅಭೂತಪೂರ್ವ ವೈಶಿಷ್ಟ್ಯಗಳ ಕಾರ್ಯಕ್ರಮಗಳಿಂದೊಡಗೂಡಿದ್ದಿತು. ಉತ್ಸವದ ಸಮೀಕ್ಷೆಯ ಮುಂದುವರಿದ ಭಾಗವನ್ನು ಇಲ್ಲಿ ಕೊಡಲಾಗಿದೆ.

—ಹೆಚ್. ಎಸ್. ಸಿದ್ಧಗಂಗಪ್ಪ

೨೮ರಂದು ನಡೆದ ಹೊರನಾಡ ಕನ್ನಡ ಸಂಘ ಸಂಸ್ಥೆಗಳ ಪ್ರತಿನಿಧಿಗಳ ಸಭೆಯ ಉದ್ಘಾಟನೆಯನ್ನು ಮುಂಬೈನಲ್ಲಿ ನೆಲಸಿರುವ ಕನ್ನಡಿಗ ಶ್ರೀ ಬಿ. ರುದ್ರಮೂರ್ತಿ ನೆರವೇರಿಸಿದರು. ದೆಹಲಿ ಆಕಾಶವಾಣಿಯ ಸುದ್ದಿ ಸಂಪಾದಕ ಡಿ. ಕೆ. ಭಾರದ್ವಾಜ ಅಧ್ಯಕ್ಷತೆ ವಹಿಸಿದ್ದರು.

ಅಮೇರಿಕಾ, ಇಂಗ್ಲೇಡ್, ಮದರಾಸ್, ಸೇಲಂ, ತಿರುಚನಾಪಳ್ಳಿ, ಆಲೂರು, ಕಾತಾಳು, ಅದವಾನಿ, ಗುಂತಕಲ್, ಮುಂಬಯಿ, ನಾಗಪುರ, ಮಲಿ, ಪುಣೆ, ಸೊಲ್ಲಾಪುರ, ನಾಸಿಕ್, ಭಿಲಾಯ್, ಪಂಜಿಮ್, ಇಂದೂರು, ಭೂಪಾಲ್, ಕರಾಚಿ, ಜಬ್ಬಲ್‌ಪುರ್, ಘೋಸ್ಪಾಲ್, ಸನ್‌ಬೆಡ್, ದೆಹಲಿ, ಹರಿದ್ವಾರ್, ಹಿಂದನ್, ಅಹಮದಬಾದ್, ಕಲ್ಕತ್ತ, ಕ್ಯಾಲಿಕಟ್, ಧನಬಾದ್, ರೂರ್ಕೆಲ, ಅಲಹಬಾದ್, ರೂಡ್ಕಿ, ಆಗ್ರ, ತಿರುವನಂತಪುರ ಮೊದಲಾದ ಭಾಗಗಳ ಕನ್ನಡ ಸಂಘ ಸಂಸ್ಥೆಗಳ ಪ್ರತಿನಿಧಿಗಳು ಭಾಗವಹಿಸಿ, 'ಹೊರನಾಡಿನಲ್ಲಿ ಕನ್ನಡದ ಬೆಳವಣಿಗೆ' ಎಂಬ ವಿಚಾರವಾಗಿ ಮಾತನಾಡಿ ಸಲಹೆಗಳನ್ನು ನೀಡಿದರು.

ಶ್ರೀ ಬಿ. ರುದ್ರಮೂರ್ತಿ ಅವರು ಮಾತನಾಡುತ್ತಾ 'ನಾವೆಲ್ಲ ಕನ್ನಡದ ರಾಯಭಾರಿಗಳು' ಎನ್ನುತ್ತಾ ಹೊರನಾಡಿನಲ್ಲಿ ಕನ್ನಡದ ವ್ಯಾಪ್ತಿ ಅಧಿಕಗೊಳ್ಳುವ ರೀತಿಯ ಯೋಜನೆ ಅಗತ್ಯ. ಹೊರನಾಡಿನಲ್ಲಿ ನೆಲಸಿರುವ ಹಿರಿಯರಲ್ಲಿ ಬೇರೂರಿರುವ ಕನ್ನಡದ ಮೇಲಿನ ಮಮತೆ, ಬಳಕೆಗಳು ಮಕ್ಕಳಲ್ಲಿ ಕುಗ್ಗುತ್ತಿರುವುದನ್ನು ತಡೆಗಟ್ಟುವುದು, ಕನ್ನಡ ಪ್ರೇಮ ಬೆಳೆಸುವ ವಾತಾವರಣ ನಿರ್ಮಾಣದಲ್ಲಿ ಸಾಹಿತ್ಯ ಪರಿಷತ್ತು, ಕರ್ನಾಟಕ ಸರ್ಕಾರ ಮತ್ತು ವಿಶ್ವವಿದ್ಯಾನಿಲಯಗಳು ನೆರವಾಗಬೇಕೆಂದರು.

ಸಭೆಯ ಅಧ್ಯಕ್ಷತೆ ವಹಿಸಿದ್ದ ಶ್ರೀ ಡಿ. ಕೆ. ಭಾರದ್ವಾಜ ಅವರು ಮಾತನಾಡಿ ಹೊರನಾಡ ಕನ್ನಡ ಸಂಸ್ಥೆಗಳ ಒಕ್ಕೂಟದ ಪಾತ್ರವನ್ನು ಕನ್ನಡ ಸಾಹಿತ್ಯ ಪರಿಷತ್ತು ವಹಿಸಿ ಎಲ್ಲಾ ಸಂಸ್ಥೆಗಳಿಗೂ ಮಾರ್ಗದರ್ಶನ ನೀಡಬೇಕು. ಮೊದಲು ಪ್ರಾದೇಶಿಕ ಡೈರೆಕ್ಟರಿಗಳನ್ನು ಸಿದ್ಧಪಡಿಸಿ ಕ್ರಮೇಣ ಅಖಿಲ ಭಾರತ ಹೊರನಾಡ ಕನ್ನಡಿಗರ ಡೈರೆಕ್ಟರಿಯು ಪ್ರಕಟಣೆಯಾಗಬೇಕು. ಪ್ರಮುಖ ನಗರಗಳಲ್ಲಿ ಕನ್ನಡ ಸಂಸ್ಥೆಗಳು ಎಂಪ್ಲಾಯ್‌ಮೆಂಟ್ ಸೇವೆ ಆರಂಭಿಸಿ ಅರ್ಹರಾದವರಿಗೆ ಸೂಕ್ತ ಉದ್ಯೋಗಾವಕಾಶ ಕಲ್ಪಿಸಿ ಕೊಡುವಂತಾಗಬೇಕೆಂದರು.

ನಂತರ ಕರ್ನಾಟಕದ ಸಂಘಸಂಸ್ಥೆಗಳ ಸಭೆಯು ಪ್ರೊ। ಜಿ. ವೆಂಕಟಸುಬ್ಬಯ್ಯ ಅವರ ಅಧ್ಯಕ್ಷತೆಯಲ್ಲಿ ನಡೆಯಿತು. ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇಶಕರಾದ ಡಾ. ಹಾ. ಮಾ. ನಾಯಕ್ ಅವರು ಉದ್ಘಾಟನೆಯನ್ನು ಮಾಡುತ್ತ

"ಕರ್ನಾಟಕದಲ್ಲಿರುವ ಕನ್ನಡ ಸಂಘಸಂಸ್ಥೆಗಳ ಉದ್ದೇಶ, ಗುರಿ ವಿವರಗಳಲ್ಲಿ ಬೇರೆ ಬೇರೆಯಾಗಿದ್ದರೂ ಒಟ್ಟು ದಲ್ಲಿ ಒಂದೆ. ಅವುಗಳ ಕೆಲಸ ಕನ್ನಡದ ಕೆಲಸ, ಉದ್ದೇಶ ಕನ್ನಡದ ಹಿತ ಸಾಧನೆ; ಕನ್ನಡಿಗರ ಬದುಕಿನ ಎಲ್ಲ ಪ್ರಗತಿ. ಈ ಸಂಸ್ಥೆಗಳಿಂದ ನಮಗೆ ಅಗತ್ಯವಾಗಿ ಆಗ ಬೇಕಾದ ಕೆಲಸವೆಂದರೆ ಕನ್ನಡ ನಾಡಿನಲ್ಲಿ ಕನ್ನಡವನ್ನು ಉಳಿಸಿ ಬಾಳಿಸುವುದು " ಎಂದು ನುಡಿದರು, ಕರ್ನಾಟಕದ ನಾನಾ ಭಾಗಗಳಿಂದ ಸುಮಾರು ಇನ್ನೂರು ಸಂಘ ಸಂಸ್ಥೆಗಳು, ಅಧ್ಯಕ್ಷರು, ಮತ್ತು ಕಾರ್ಯ ದರ್ಶಿಗಳು ಭಾಗವಹಿಸಿ ಕಾರ್ಯಕ್ರಮ ಯಶಸ್ವಿಯಾಗಿ ನಡೆಯಲು ಕಾರಣರಾದರು.

ಸಂಜೆ ಶ್ರೀ ಕೆ. ಎಸ್. ನಿಸಾರ್‌ಅಹಮದ್ ಅವರ ಅಧ್ಯಕ್ಷತೆಯಲ್ಲಿ ಕವಿಗೋಷ್ಠಿ ನಡೆಯಿತು. ಸಾಹಿತಿ ಡಾ। ಜಿ. ಪಿ. ರಾಜರತ್ನಂ ಅವರು ಗೋಷ್ಠಿಯನ್ನು ಉದ್ಘಾಟಿಸಿ, ಸಾಂಕೇತಿಕವಾಗಿ 'ನಾಗನ ಪದಗಳು' ಸಂಗ್ರಹದಲ್ಲಿರುವ ಎರಡು ಪದ್ಯಗಳನ್ನು ಹಾಡಿ ಕವಿ ಗೋಷ್ಠಿಗೆ ದಾರಿಮಾಡಿಕೊಟ್ಟರು ಶ್ರೀಯುತರಾದ ಸುಬ್ಬರಾಯ ಚೊಕ್ಕಾಡಿ, ಡಾ. ಚಂದ್ರಶೇಖರ ಕಂಬಾರ, ಬುದ್ದಣ್ಣ ಹಿಂಗಮಿರೆ, ಜಯಸುದರ್ಶನ, ಶಾಮಸುಂದರ, ಬಿದರ ಕುಂದಿ, ಸಿಂಪಿ ಲಿಂಗಣ್ಣ, ದೇಶ ಪಾಂಡೆ ಸುಬ್ಬರಾಯ, ಶಂ. ಗು ಬಿರಾದಾರ್, ಕೆ. ಎಸ್ ಶಿವಪ್ಪ, ಬಿ. ಆರ್ ಲಕ್ಷ್ಮಣ ರಾವ್, ಹೆಚ್. ಎಂ. ಚನ್ನಯ್ಯ, ಚಂದ್ರಶೇಖರ ಪಾಟೀಲ, ಸಿ. ಪಿ. ಕೃಷ್ಣಕುಮಾರ್, ಎನ್. ಎಂ. ಹುಣಿಸ್ಯಾಳ, ಎಚ್. ಎಂ. ರಂಗನಾಥ್, ಗೊ. ರು. ಚನ್ನಬಸಪ್ಪ, ಬಳ್ಳೇಕೆರೆ ಹನುಮಂತಪ್ಪ, ಕುಲಕರ್ಣಿ, ಶ್ರೀಮತಿಯರಾದ ಎಸ್. ಉಷಾ, ಎನ್. ವಿ ಭಾಗ್ಯಲಕ್ಷ್ಮಿ, ಶೈಲಜಾಉಡಚಣ, ಕಮಲಾ ಹೆಮ್ಮಿಗೆ, ಅವರು ತಮ್ಮ ತಮ್ಮ ಕವನಗಳನ್ನು ತಮ್ಮದೇ ಆದ ರೀತಿಯಲ್ಲಿ ಓದಿದರು.

ಆರುದಿನಗಳ ಕಾಲ ವೈಭವದಿಂದ ನಡೆದ ವಜ್ರ ಮಹೋತ್ಸವದ ಕಾರ್ಯಕ್ರಮ 28ರ ಸಂಜೆ ಮುಕ್ತಾಯವಾಯಿತು. ಸಮಾರೋಪ ಸಮಾರಂಭದ ಅಧ್ಯಕ್ಷತೆಯನ್ನು ಪರಿಷತ್ತಿನ ಅಧ್ಯಕ್ಷ ಶ್ರೀ ಜಿ. ನಾರಾಯಣ ಅವರು ವಹಿಸಿದ್ದರು. ಅವರು ಮಾತನಾಡುತ್ತಾ ಟೀಕೆ ಮಾಡುವುದು ಸುಲಭವೆಂದೂ ಸಂಸ್ಥೆಕಟ್ಟುವುದು ಕಷ್ಟವೆಂದೂ ನುಡಿಯುತ್ತಾ, ಪರಿಷತ್ತು ಕ್ರಮಬದ್ಧವಾ[...] ನಡೆಯುತ್ತದೆ. ಯೋಜನಾಬದ್ಧವಾಗಿ ಕೆಲಸಗಳನ್[...] ಕೈಗೊಳ್ಳುತ್ತದೆ. ಸರಕಾರ ಯೋಜನೆಗಳನ್ನು ಪರಿಶೀಲಿ[...] ಹಣವನ್ನು ಮಂಜೂರು ಮಾಡುತ್ತದೆ. ಭಾರತ[...] ಬೇರಾವ ಪರಿಷತ್ತೂ ಮಾಡದಂತಹ ಕೆಲಸವನ್[...] ಮಾಡಿದೆ. ಹೊರಗಿನವರು ಈ ಬಗ್ಗೆ ಮೆಚ್ಚಿಗೆಯನ್[...] ವ್ಯಕ್ತಪಡಿಸಿದ್ದಾರೆ ಎಂದರಲ್ಲದೆ ವಜ್ರಮಹೋತ್ಸವ[...] ಕಾರ್ಯಕ್ರಮದ ಬಗ್ಗೆ ನಾನು ಕಂಡ ಕನಸು ನನಸ[...] ಗಿದೆ ಎಂದು ತೃಪ್ತಿಯನ್ನು ವ್ಯಕ್ತಪಡಿಸಿದರು. ಡಾ. ಎಸ[...] ವಿ. ರಂಗಣ್ಣ ಅವರು ಸಮಾರೋಪ ಭಾಷಣ ಮಾ[...] ದರು. ಪರಿಷತ್ತಿನ ಕಾರ್ಯದರ್ಶಿ ಶ್ರೀ ಜಿ. ಕೆ[...] ಗುಂಡೂರಾವ್ ವಂದನಾರ್ಪಣೆ ಮಾಡಿದರು.

ವಜ್ರಮಹೋತ್ಸವದ ಅಂಗವಾಗಿ ಪ್ರತಿದಿ[...] ಸಂಜೆ ಮನರಂಜನಾ ಕಾರ್ಯಕ್ರಮಗಳನ್ನು ಏರ್ಪಡಿ[...] ಲಾಗಿತ್ತು. ಪ್ರತಿದಿನ ಜನಪದ ಕಲೆಗಳ ಪ್ರದರ್ಶನ ನಗ[...] ರದ ನಾಗರೀಕರಿಗೆ ಹೊರನಾಡಿನಿಂದ ಬಂದ ಅಭಿಮಾ[...] ಗಳ ಮೆಚ್ಚುಗೆಯನ್ನು ಪಡೆಯಿತು. ಶ್ರೀ ಗೊ. ರು[...] ಚನ್ನಬಸಪ್ಪ ಮತ್ತು ಶ್ರೀ ವಸಂತಕವಲಿ ಅವರು ರಚಿಸಿದ 'ಕರ್ನಾಟಕ ವೈಭವ'ವನ್ನು ಅತ್ಯಂತ ಸುಂದರವಾಗಿ ವ್ಯವಸ್ಥಿತವಾಗಿ ಪ್ರಭಾತ್ ಕಲಾವಿದರು ನಡೆಸಿಕೊಟ್ಟರು. ಇದು ಕರ್ನಾಟಕದಲ್ಲಿಯೇ ಮೊದಲ ಪ್ರಯತ್ನ. ಮೊದಲ ಹಂತದಲ್ಲಿಯೇ ಪ್ರದರ್ಶನ ಜನರ ಮೆಚ್ಚಿಗೆಯನ್ನು ಪಡೆಯಿತು. ಇದಲ್ಲದೆ ಶ್ರೀ ಬಾಳಪ್ಪ ಹುಕ್ಕೇರಿ ಅವ[...] ರಿಂದ ಭಾವಗೀತೆ, ಶ್ಯಾಮಲಾ ಜಾಗೀರ್‌ದಾರ್ ಅವ[...] ರಿಂದ ಕನ್ನಡ ಗೀತೆ, ಶ್ರೀ ಆರ್. ವಿ. ಶೇಷಾದ್ರಿಗವಾಯಿ ಅವರಿಂದ ವಚನಗಾಯನ, ಮುಂಬಯಿಯ ವಿದ್ಯಾರ್ಥಿ ಗಳಿಂದ ಯಕ್ಷಗಾನ, ವೆಂಕಟೇಶ ನಾಟ್ಯಮಂದಿರ ಅವ[...] ರಿಂದ ನೃತ್ಯನಾಟಕ, ಶ್ರೀ ಗುರುರಾಜುನಾಯ್ಡು ಅವ[...] ರಿಂದ ಹರಿಕಥೆ, ಅನಂತಸ್ವಾಮಿ ಮತ್ತು ವೃಂದದವ[...] ರಿಂದ ಕನ್ನಡ ಗೀತೆಗಳು, ಜಗಜ್ಯೋತಿ ಬಸವೇಶ್ವರ ನಾಟಕದ ಒಂದು ದೃಶ್ಯ, ಶ್ಯಾಮಲಾ ಭಾವೆ ಮತ್ತು ವೃಂದದವರಿಂದ ದೇವರನಾಮ, ಶ್ರೀ ನಾಟಕ ಮಂಡಲಿ ಅವರಿಂದ 'ಕೃಷ್ಣಲೀಲೆ' ಅರುಣಕುಮಾರ್ ಮಿತ್ರ ಮಂಡಲಿ ಅವರಿಂದ 'ದಾನಶೂರ ಕರ್ಣ' ಈ ಕಾರ್ಯ ಕ್ರಮಗಳು ಮನರಂಜನಾಕಾರ್ಯಕ್ರಮಗಳಲ್ಲಿ ಪ್ರಮುಖವಾದುವುಗಳು. —

# ಯಾವುದು ಎಂತು ?

—ಬಿ. ಸಿ. ಸಿದ್ಧಲಿಂಗ ಶಿವಚಾರ್ಯ

ಬೆಳೆಗೆ ಮುಳ್ಳು ಬೇಲಿ — ಧನಕ್ಕೆ ಧರ್ಮದ ಬೇಲಿ.
ಎಣ್ಣೆಯಿರುವರೆಗೆ ದೀಪ — ಪುಣ್ಯಯಿರುವವರೆಗೆ ಜೀವ
ದಾರಿಯಲ್ಲಿ ಹಳ್ಳ-ದಿಣ್ಣೆಗಳಿವೆ — ಜೀವನದಲ್ಲಿ ಸುಖ-ದುಃಖಗಳಿವೆ.
ಕೋಪಕ್ಕೆ ಮಿಂಚಿದ ತಾಪವಿಲ್ಲ — ಶಾಂತಿಗೆ ಮಿಂಚಿದ ಜ್ಞಾನವಿಲ್ಲ.
ಜಲಧಿಗೆ ಅಲೆಯಿಂ ನೆಮ್ಮದಿಯಿಲ್ಲ — ಮನಕ್ಕೆ ಧನದಿಂ ನೆಮ್ಮದಿಯಿಲ್ಲ.
ಸುಟ್ಟ ಬೀಜ ಮೊಳೆಯುವುದಿಲ್ಲ — ಕೊಟ್ಟು ಪಡೆದವನಿಗೆ ಹುಟ್ಟಿಲ್ಲ.
ಬೆಳಕು ಬಂದರೆ ಚಲನಚಿತ್ರ ಕಾಣುವುಲ್ಲ — ಜ್ಞಾನ ಬಂದರೆ ಬವಣೆ ಅರಿವಾಗುವುದಿಲ್ಲ.
ಟಪಾಲಿನಲ್ಲಿ ಹಾಕಿದ್ದು ವಿಳಾಸದಾರನಿಗೆ ಸೇರುತ್ತೆ — ಬಡವನಿಗೆ ಹಾಕಿದ್ದು ಪರಮಾತ್ಮನಿಗೆ ಸೇರುತ್ತದೆ.
ಟೆಲಿಸ್ಕೋಪಿನಿಂದ ನಕ್ಷತ್ರಗಳನ್ನು ಕಾಣಬಹುದು — ಅಂತಶ್ಚಕ್ಷುಗಳಿಂದ ಪರಮಾತ್ಮನನ್ನು ಕಾಣಬಹುದು
ಆಕಾಶವಾಣಿ ರೇಡಿಯೋದಲ್ಲಿ ಬರುತ್ತೆ — ಪರಮಾತ್ಮನ ವಾಣಿ ಜ್ಞಾನಿಯ ಕಿವಿಯಲ್ಲಿ ಮೊಳಗುತ್ತೆ.

## ಯಾವುವು ಶೋಭಿಸುವುದಿಲ್ಲ ?

ಧರ್ಮ ನೀಡದ ಕೈ
ಗುರೂಪದೇಶವಿಲ್ಲದ ಜನ್ಮ
ಹೃದಯ ಶುದ್ಧಿಯಿಲ್ಲದ ಭಕ್ತಿ
ಜ್ಞಾನವಿಲ್ಲದ ವಿದ್ಯೆ
ನೀತಿಯಿಲ್ಲದ ಅರಸು
ಭಕ್ತಿಯಿಲ್ಲದ ಪೂಜೆ
ನೀರಿಲ್ಲದ ಕೆರೆ
ಗುರಿಯಿಲ್ಲದ ಕೆಲಸ
ದುರುದ್ದೇಶಪೂರಿತ ದಾನ
ಶೂನ್ಯ ಲಲಾಟ
ನೆರಳಿಲ್ಲದ ಮರ
ಪತಿ ಯಿಲ್ಲದ ಸತಿ
ಸಜ್ಜನರಿಲ್ಲದ ಊರು
ದೈವಕ್ಕಂಜದ ಮಾನವ
ವ್ಯಾಧಿಗ್ರಸ್ಥ ಶರೀರ
ಲಜ್ಜೆಯೆ ಇಲ್ಲದ ನಾರಿ
ಮಜ್ಜಿಗೆಯಿಲ್ಲದ ಊಟ
ಅಪಾತ್ರನಿಗೆ ಕೊಡಲ್ಪಟ್ಟ ದಾನ

(14 ನೇ ಪುಟದಿಂದ)

ದಂತಾಗುತ್ತದೆ. ಗಳಿಸಿಕೊಂಡಿರುವ ಸ್ವಾತಂತ್ರ್ಯವನ್ನು ಉಳಿಸಲಾಗದೆ ಅಸಮರ್ಥರಾದಂತಾಗುತ್ತದೆ" –ಇದು ಎಲ್ಲರ ಭಾಷಣದಲ್ಲಿಯೂ ಹೊರಬರುತ್ತಿರುವ ಕಳಕಳಿಯ ನುಡಿ.

ಆದರೆ ಇಂದು ನಾವೆದುರಿಸುವಂತಹ ಸಮಸ್ಯೆಗಳು ಭಾರತದ ತುಂಬಾ ಅಪಾರವಾಗಿವೆ. ಸತ್ಯ ನ್ಯಾಯ ಧರ್ಮಗಳು ಇಲ್ಲವೆಂದಲ್ಲ. ಅವುಗಳ ಒಡನಾಡಿಗಳಾದ ಕೆಲವೇ ಮಂದಿಗಳಲ್ಲಿ ಕ್ರಿಯಾಶೀಲತೆಯಿದೆ. ಆದರೆ ಆಳಿಸಿಕೊಳ್ಳುವವರಲ್ಲಿ ಆಳುವವರಲ್ಲಿ ಕಾರ್ಯ ನಿರ್ವಹಿಸುವ ಅಧಿಕಾರಿಗಳಲ್ಲಿ ಹಿರಿಯ ಕಿರಿಯ ಕಾರಕೂನರಲ್ಲಿ –ಬಹುಜನರಲ್ಲಿ ಸತ್ಯದ ನಾಡಿಯ ಮಿಡಿತ ಕೊಂಚ ಕಡಿಮೆಯಾದಂತೆನಿಸುತ್ತದೆ. ನೀರುಂಬುವೇರಿತನದ ವ್ಯಕ್ತಿಗಳಲ್ಲಿ ಇಳುವರಿ ಹೆಚ್ಚಿ ಪ್ರಮಾಣೀಕತೆಯ ನಡತೆಗಳು ಒದ್ದುಕೊಳ್ಳಹತ್ತಿವೆ. ನಮ್ಮ ಪಾಲಿನ ಕಾರ್ಯ ಪೂರೈಕೆಯಲ್ಲಿ ಪೂರ್ಣ ಘಟ್ಟದವರೆಗೆ ತಲುಪದಾಗಿದ್ದೇವೆ. ಬಡತನದ ಬದುಕು ಮುಳ್ಳಾಗಿ ಬಡ ಜನಾಂಗವಾದ ನಾವಿಂದು ಬಿಳಿಯರ ಬದಲು ಹಣವಂತರ ಮತ್ತಿತರ ಶಕ್ತಿಯುತ ಮಂದಿಯ ಕಾಲಿಗೆ ಸಿಕ್ಕಿ ತುಳಿಸಿಕೊಳ್ಳಬೇಕಾಗಿದೆ. ಬೆಳೆಗಳಲ್ಲಿ ಅನುತ್ತೀರ್ಣತೆ, ಜಲಸಮಸ್ಯೆಯಲ್ಲಿ ಪ್ರಕೃತಿಯ

ಕೋಪ, ಬೆಲೆಗಳ ಏರಿಕೆ, ಅನ್ನ, ಅರಿವೆ, ಔಷ
ಉದ್ಯೋಗಗಳ ಕೊರತೆ ಮತ್ತಿತರ ಸಮಸ್ಯೆಗಳು ದಿ
ದಿನೇ ಹೊಡೆದಿರುವೆ ಗೂಡಿನಂತೆ ಬಹುತರವಾಗಿ ಉದ್ಭ
ಸುತ್ತಿವೆ. ಇವುಗಳ ಹೊಡೆತದ ಜೊತೆಗೆ ನಾಲಗೆಯ
ಸಕ್ಕರೆ ಸುರಿಸಿ ಎದೆಯಲ್ಲಿ ಕತ್ತರಿಗಳನ್ನು ಆಡಿಸುವ ಹಿ
ಚಿಂತಕರ ಸಂಖ್ಯೆ ಅಧಿಕವಾಗುತ್ತಿದೆ. ಹೀಗಾಗಿ ಜ
ವೃತ್ತದ ಸುತ್ತ ಮುತ್ತಿರುವ ಬಹುತೇಕ ಸಮಸ್ಯೆಗಳ
ಕರ್ತವ್ಯೋತ್ಸಾಹಿಗಳ, ಕಾರ್ಯ ನಿಷ್ಠುರ ಅಭಾವ
ಸಮಸ್ಯೆಯೂ ಒಂದಾಗಿದೆ. ಇಂತಹ ರಂಗದ ಪರಿಸರ
ಜೀವನಾಡಿ ಜನತೆ. ಈ ಜನತೆಯ ಬಾಳಿನ ಮತ್ತ
ಇವರ ಬದುಕಿನ ಸುತ್ತಲೂ ಬೆಂಗಾವಲಿನಂತಿರುವ ಶ್ರ
ಗಳನ್ನು ಹೋಗಲಾಡಿಸುವುದು; ಅಭಾವದ ಅಭಿವೃ
ಗಳನ್ನು ತಡೆಗಟ್ಟುವುದು ಸ್ವಾತಂತ್ರ್ಯದ ರಕ್ಷಣೆಯ ಕೆಲ
ಗಳಲ್ಲಿ ಪ್ರಥಮದ್ದಾಗಿದೆ.

ಇಂತಹ ಕಾರ್ಯ ನಿರ್ವಾಹ ನಮ್ಮಿಂದಾದಾಗ ನವ
ಕೊಡುಗೆ ಗಾಂಧೀಜಿಗೆ ದೊರೆತೀತು. ಸ್ವಾತಂತ್ರ್ಯ ಸಮ
ತೋಮುಖ ಶಕ್ತಿ ನಮ್ಮಲ್ಲಿ ಒಡಮೂಡಿತು. ಗಾಂಧೀ
ಬಯಸಿದ್ದ ರಾಮರಾಜ್ಯದ ಕನಸು ನನಸಾಗಿ ಭಾರತ
ಸ್ವಾತಂತ್ರ್ಯ ಜ್ಯೋತಿಯ ಪ್ರಭೆ ಇಮ್ಮಡಿಯಾದೀತು.

---

(19 ನೇ ಪುಟದಿಂದ)

ಕೊಂಡು ಅದಕ್ಕೆ ತಮ್ಮದೇ ಆದ ಧೃತಿಯನ್ನು ತುಂಬುವುದರಲ್ಲಿ ಈ ಜನ ನಿಸ್ಸೀಮರು. ಸೇನಾಕ್ರಮವನ್ನು ಜರ್ಮನಿಯಿಂದಲೂ, ನೌಕಾ ರೀತಿಯನ್ನು ಬ್ರಿಟನ್ನಿನಿಂದಲೂ, ರಾಜಶಾಸನವನ್ನು ಪ್ರಷ್ಯದಿಂದಲೂ ಅನುಕರಿಸಿದರು. ರೈಲು ತಂತಿಗಳನ್ನು ನಿರ್ಮಿಸಲು ಇಂಗ್ಲಿಷರನ್ನು ನೇಮಿಸಿದರು. ಅಂಚೆ, ವ್ಯವಸಾಯಾಭಿವೃದ್ಧಿ, ಉನ್ನತ ಶಿಕ್ಷಣಗಳಿಗೆ ಅಮೇರಿಕರನ್ನು ಕರೆಸಿದರು; ವೈದ್ಯಶಾಲೆಯನ್ನು ಜರ್ಮನ್ನರು ಕ್ರಮಪಡಿಸಿದರು. ಫ್ರೆಂಚ್‌ರು ಸೇನಾ ಶಿಕ್ಷಣವನ್ನು ಕೊಟ್ಟು ಹೊಸ ಹೊಸ ಕಾನೂನುಗಳನ್ನು ಮಾಡಿದರು. ಅತಿ ಪುರಾತನ ದೇಶವಾಗಿದ್ದ ಜಪಾನ್ 25 ವರ್ಷಗಳೊಳಗೆ ಸಂಪೂರ್ಣ ಆಧುನಿಕ ರಾಜ್ಯವಾಯಿತು.

ಅಷ್ಟು ಅಲ್ಪಾವಧಿಯಲ್ಲಿ ಅಷ್ಟು ಸಂಪೂರ್ಣವಾಗಿ ಮತ್ತಾವ ದೇಶವೂ ರೂಪಾಂತರಗೊಂಡಿಲ್ಲ. ರಷಿಯಾದ ಪ್ರಚಂಡ ನೌಕಾಬಲವನ್ನು 1905 ರಲ್ಲಿ ಲೀಲಾಜಾಲವಾಗಿ ಸದೆ ಬಡಿದು ಜಗತ್ತನ್ನು ದಂಗು ಬಡಿಸಿತು. ಎರಡನೇ ಮಹಾ ಯುದ್ಧದಲ್ಲಿ ಜಪಾನ್ ಪೆರ್ಲ್ ಹಾರ್ಬರ್‌ನಲ್ಲಿ ಗಳಿಸಿದ ವಿಜಯವು ಪೃಥ್ವಿಯನ್ನು ಅಲುಗಾಡಿಸಿತು.

ನ್ಯೂಗಿನಿ, ಜಾವಾ, ಸೆಲೆಬಿಸ್, ಬೋರ್ನಿಯೋ
ಮಲಯಾ, ಫಿಲಿಪೈನ್ಸ್, ಇಂಡೋಚೀನಾಗಳನ್ನು ಗೆದ್ದು
ಬರ್ಮಾ, ಮಣಿಪುರದವರೆಗೆ ನುಗ್ಗಿ ಹೋಯಿತು.

ಟೋಕಿಯೋ ಸ್ತ್ರೀಯರು ಸೌಂದರ್ಯೋಪಾ
ಕರು. ಸ್ಥೂಲಕಾಯದ, ದಪ್ಪ ಟೊಂಕದವರು ಬಹು
ಕಡಿಮೆ. ಆಕರ್ಷಕ ಕೇಶವಿನ್ಯಾಸ, ಕಲಾಭಿರುಚಿಗಳಿಂ
ಅವರ ಚೆಲುವು ಬೆಳಗುತ್ತದೆ. ಸೌಂದರ್ಯ, ದೇಹಕಾಂತಿ
ಸಮತೋಲದ ಮೈ ಕಟ್ಟಿಗಾಗಿ ಬಹು ಪರಿಶ್ರಮಿಸಿ
ವೈಜ್ಞಾನಿಕ ಕ್ರಮಗಳನ್ನು ಪ್ರಯೋಗಿಸುತ್ತಾರೆ. ತೂ
ವನ್ನು ಕಡಿಮೆ ಮಾಡಲು ವೇಗವಾಗಿ ಗರಗರನೆ ತಿರುಗುವ
ಉಕ್ಕಿನ ತಗಡಿನಿಂದ ಕೈಕಾಲು, ಟೊಂಕಗಳನ್ನು ಬಿಗಿದು
ತಗಡಿನ ಮೇಲೆ ಕೈಕಾಲು ಚಾಚಿ ಮಲಗುತ್ತಾರೆ.

ಟೋಕಿಯೋದ ಉಪನಗರಗಳಲ್ಲಿ ಅಂಗಡಿಗಳು ದಿನವೂ
24 ಗಂಟೆ ತೆರೆದಿರುತ್ತವೆ; ಬೀಗ ಹಾಕಿರುವುದಿಲ್ಲ. ಗಿರಾಕಿ
ಗಳು ಪದಾರ್ಥಗಳನ್ನೂ, ಬಣ್ಣದ ಚಿತ್ರಗಳನ್ನೂ ನೋಡು
ತ್ತಿರಬಹುದು. ಅಂಗಡಿಯವರು ಅಡ್ಡಿ ಬರುವುದಿಲ್ಲ
ಒಳಗಿರುತ್ತಾರೆ; ಕೂಗಿದಾಗ ಹೊರಬರುತ್ತಾರೆ. ಅವ
ಪ್ರಾಮಾಣಿಕತೆ ಹೆಸರುವಾಸಿ. —

# ನಿಮಗೆ ಯಾವುದು ಸೂಕ್ತ ? ಆಯ್ದುಕೊಳ್ಳಿ ! ಆರಂಭಿಸಿರಿ ! !

ಸುಪ್ರಸಿದ್ಧ ಸುಕ್ಷೇತ್ರ ಸಿದ್ಧಗಂಗಾ. ಇಲ್ಲಿ ಎಡೆಬಿಡದೆ ನಡೆಯುತ್ತಿರುವ ತ್ರಿವಿಧ ದಾಸೋಹಗಳು ಎಲ್ಲೆಲ್ಲೂ ಜನಜನಿತ. ಸುಮಾರು ದಶಕಗಳ ಸಾರ್ವಜನಿಕ ಸೇವೆ ಎಲ್ಲರನ್ನೂ ಆಕರ್ಷಿಸಿದೆ; ಅವರ ಮೆಚ್ಚುಗೆಯನ್ನು ಪಡೆದಿದೆ.

ಮೆಚ್ಚಿದ ಮಹನೀಯರು ನಿಂತು ಬೆಂಬಲಿಸುತ್ತಿದ್ದಾರೆ. ಕೊಡುಗೈ ದೊರೆಗಳಾಗಿ ನೀಡುತ್ತಿದ್ದಾರೆ. ಅನೇಕರು ಅನೇಕ ವಿಧಗಳಲ್ಲಿ ಈ ಬೃಹತ್ಪ್ರಮಾಣದ ಮಹತ್ಕಾರ್ಯಕ್ಕೆ ನೆರವಾಗುತ್ತಿದ್ದಾರೆ. **"ಸಾರ್ವಜನಿಕರ ನೆರವೇ ಸಂಸ್ಥೆಯ ಮಹಾನಿಧಿ "** ಎಂಬುದಾಗಿ **ಶ್ರೀ** ಗಳವರೇ ಸಾರಿ ಸಾರಿ ಹೇಳಿದ್ದಾರೆ. ದಾನಿಗಳ ದಾನ ಪವಿತ್ರ ಪಾತ್ರತ್ವವನ್ನು ಇಲ್ಲಿ ಹೊಂದುತ್ತದೆ. ಈ ಮಹಾಶಯರುಗಳಿಗೆ **'ಸಿದ್ಧಗಂಗಾ'** ತುಂಬು ಧನ್ಯವಾದಗಳನ್ನು ಅರ್ಪಿಸುತ್ತದೆ.

**ಧಾನ್ಯ ಸಂಗ್ರಹಣೆ:**

ಪ್ರತಿವರ್ಷ ಸುಗ್ಗಿಯಲ್ಲಿ ಇಂತಿಷ್ಟು ಧಾನ್ಯ ಮುಡುಪಾಗಿಡಿ.
ನೀವು ಬಂದಾಗ ತಂದು ಅರ್ಪಿಸಿರಿ, ಅಥವಾ ಕ್ಷೇತ್ರದ ಪ್ರತಿನಿಧಿಗಳು ಬಂದಾಗ ಒಪ್ಪಿಸಿರಿ
ನೀವು ನೀಡಿದ ತೆನೆಗಳು ಕೂಡಿ ರಾಶಿಯಾಗಿ ದಾಸೋಹಕ್ಕೆ ವಿನಿಯೋಗವಾಗಲಿ.

**ಧನ ಸಹಾಯ:**

ಪ್ರತಿ ತಿಂಗಳೂ ಯಥಾಶಕ್ತಿ ನಿಮ್ಮ ಕಾಣಿಕೆ ಕಳಿಸಿರಿ
ನಿಮ್ಮ ಖಾತೆ ಇರುವ ಬ್ಯಾಂಕಿನಲ್ಲಿ ಶ್ರೀ ಕ್ಷೇತ್ರದ ಖಾತೆ ಇರುತ್ತೆ.
ಪ್ರತಿ ತಿಂಗಳೂ ನಿಮ್ಮ ಖಾತೆಯಿಂದ ಶ್ರೀಗಳವರ ಖಾತೆಗೆ ವರ್ಗಾಯಿಸಲು ಬ್ಯಾಂಕ್ ಮೇನೇಜರ್‌ರವರಿಗೆ ಒಂದು ಪತ್ರ ಬರೆಯಿರಿ.
ನಿಮಗೆ ಶ್ರಮವಿಲ್ಲದೆ ನಿಮ್ಮ ಕಾಣಿಕೆ ಸಂದಾಯವಾಗುತ್ತದೆ.
ವರ್ಷಕ್ಕೊಮ್ಮೆ ನಿಮ್ಮಿಂದ ಸಂದಾಯವಾದ ಒಟ್ಟು ಕಾಣಿಕೆಯ ಬಗ್ಗೆ ಪತ್ರ ಬರುತ್ತೆ.

**ಕೂಡಿಟ್ಟು ಕಳುಹಿಸಿರಿ:**

ಒಂದೇ ಬಾರಿಗೆ ಇಂತಿಷ್ಟೆಂದು ದಾನ ನೀಡುವುದು ಹಲವರಿಗೆ ಅಸಾಧ್ಯ.
ಹಾಗಿದ್ದಲ್ಲಿ ಶ್ರೀ ಕ್ಷೇತ್ರದ ಒಂದು ಹುಂಡಿಯನ್ನು ನಿಮ್ಮ ಮನೆಯಲ್ಲಿಡಿರಿ,
ನಿತ್ಯ ಎಷ್ಟು ಸಾಧ್ಯವೋ ಅಷ್ಟನ್ನು ಹಾಕಿ ವರ್ಷಕ್ಕೊಮ್ಮೆ ಶ್ರೀ ಮಠಕ್ಕೆ ಕಳಿಸಿರಿ.

ಯಾವುದೇ ಹಣ ಕಳಿಸುವವರು, ಎಂ. ಒ, ಅಥವಾ ಬ್ಯಾಂಕ್ ಡ್ರಾಫ್ಟ್ ಮೂಲಕ **ಶ್ರೀ ಶ್ರೀ ಶಿವಕುಮಾರಸ್ವಾಮಿಗಳು,** ಶ್ರೀ ಸಿದ್ಧಗಂಗಾಮಠ, ತುಮಕೂರು ಜಿಲ್ಲಾ–572131 ಇವರಿಗೆ ನೇರವಾಗಿ ಕಳುಹಿಸಬೇಕು.

ಸಹಸ್ರಾರು ಬಡಮಕ್ಕಳ ಆಶ್ರಯ ಕೇಂದ್ರ "ಶ್ರೀ ಸಿದ್ಧಗಂಗಾ". ಇಲ್ಲಿಗೆ ನೀಡಿದ ಉದಾರ ಹೃದಯದ ನಿಮ್ಮ ದಾನ ನಿತ್ಯದಾಸೋಹಕ್ಕೆ ವಿನಿಯೋಗವಾಗುತ್ತದೆ. ನೀಡಿರಿ ನಿತ್ಯಸಂತೋಷವನ್ನು ಹೊಂದಿರಿ.

ಭಕ್ತಮಂಡಲಿ
ಶ್ರೀ ಸಿದ್ಧಗಂಗಾ ಕ್ಷೇತ್ರ

"SIDDAGANGA" Monthly, Sree Siddaganga Mutt.
Registered with the Registrar of News papers for India under No. 17139/
KRN Q-

# ದುರ್ಬಲ ವರ್ಗಗಳಿಗೆ ಆರ್ಥಿಕ ಸ್ವಾತಂತ್ರ್ಯ

ದೇಶಕ್ಕೆ ಸ್ವಾತಂತ್ರ್ಯ ಲಭಿಸಿ ಇದೀಗ 30 ವರ್ಷಗಳು ಕಳೆದಿವೆ.

**ದುರ್ಬಲ ಜನತೆಯ ಸಾಮಾಜಿಕ ಹಾಗೂ ಆರ್ಥಿಕ ಸ್ವಾತಂತ್ರ್ಯಕ್ಕಾಗಿ ಕರ್ನಾಟಕ ಸರ್ಕಾರ ಕೈಗೊಂಡ ಹಲವು ಕಾರ್ಯಕ್ರಮಗಳು**

★ ಗ್ರಾಮಾಂತರದ ಬಡ ಜನತೆಗೆ ಕೈಸಾಲ ಅಥವಾ ಬಳಕೆ ಸಾಲವನ್ನು ಒದಗಿಸಲು ಯೋಜನೆ;
25 ರೂ. ನಿಂದ 125 ರೂ. ವರೆಗೆ ಇಂತಹ ಸಾಲವನ್ನು ನೀಡಲು 6.2 ಕೋಟಿ ರೂ. ವ್ಯವಸ್ಥೆ.
ರಾಜ್ಯದಲ್ಲಿ ಐದು ಲಕ್ಷಕ್ಕೂ ಹೆಚ್ಚು ಕುಟುಂಬಗಳಿಗೆ ಇದರಿಂದ ಪ್ರಯೋಜನ.

★ ಹದಿನೇಳು ಲಕ್ಷಕ್ಕೂ ಹೆಚ್ಚು ಶಾಲಾ ಮಕ್ಕಳಿಗೆ ಮಧ್ಯಾಹ್ನದ ಊಟದ ವ್ಯವಸ್ಥೆ.

★ ಸುಮಾರು 2 ಲಕ್ಷ ಜನರಿಗೆ ವೃದ್ಧಾಪ್ಯ ವೇತನ.

★ ಪರಿಶಿಷ್ಟ ಜಾತಿ ಮತ್ತು ಪಂಗಡಗಳಿಗೆ ಕಾದಿರಿಸಿರುವ ಶೇ. 18 ರಷ್ಟು ಸ್ಥಾನಗಳ ಜೊತೆಗೆ, ಹಿಂದುಳಿದ ವರ್ಗ, ಜಾ
ಪಂಗಡ ಹಾಗೂ ವಿಶೇಷ ವರ್ಗಗಳಿಗಾಗಿ ಶೇ. 40 ರಷ್ಟು ಉದ್ಯೋಗಗಳ ಮೀಸಲಾತಿ.

★ ಹತ್ತು ಜಿಲ್ಲೆಗಳ 46 ತಾಲ್ಲೂಕುಗಳಲ್ಲಿ ಅಭಾವ ಪೀಡಿತ ಪ್ರದೇಶ ಅಭಿವೃದ್ಧಿ ಯೋಜನೆಯನ್ವಯ ಸಣ್ಣ ನೀರಾವರಿ
ಭೂಸಾರ ಸಂರಕ್ಷಣೆ, ಖುಷ್ಕಿ ಬೇಸಾಯ, ಅರಣ್ಯಾಭಿವೃದ್ಧಿ, ಹೈನುಗಾರಿಕೆ, ತೋಟಗಾರಿಕೆ, ಮೀನುಗಾರಿಕೆ
ಮತ್ತು ರೇಷ್ಮೆ ವ್ಯವಸಾಯಗಳಿಗಾಗಿ 15 ಕೋಟಿ ರೂ. ವೆಚ್ಚದ ಕಾರ್ಯಕ್ರಮ.

★ ಗ್ರಾಮೀಣ ಪ್ರದೇಶದ ಮನೆ ಇಲ್ಲದವರಿಗೆ ಏಳೂವರೆ ಲಕ್ಷಕ್ಕೂ ಮೇಲ್ಪಟ್ಟು ಉಚಿತ ನಿವೇಶನಗಳ ಹಂಚಿಕೆ.
ಜನತಾ ವಸತಿ ಯೋಜನೆಯನ್ವಯ 75 ಸಾವಿರ ಮನೆಗಳ ನಿರ್ಮಾಣ.

ಪ್ರಕಟಣೆ : ಕರ್ನಾಟಕ ಸರ್ಕಾರದ ವಾರ್ತಾ ಮತ್ತು ಪ್ರಚಾರ ಇಲಾಖೆ.

ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾಮಠ